CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮೇ ೨೬, ೨೦೦೫ (ಜೇಷ್ಠ ೫ ಶಕ ವರ್ಷ ೧೯೨೭) | ಸಂಚಿಕೆ ೨೧ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಲೋಕೋಪಯೋಗಿ ಇಲಾಖೆ
### ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ
### ಟೆಂಡರ್ ಪ್ರಕಟಣೆ

**ನಂ. ಇಎನ್‌ಹೆಚ್/ಚಿ/ಸ.ಇ-1/ ಟೆಂ.ಪ್ರ/ರಾಹೆ.63/ಸೇತುವೆ/ಕಿಮೀ.300.250/04-05/510 ದಿನಾಂಕ: 10ನೇ ಮೇ 2005**

ಮೊಹರಾದ ಐಟಂವಾರು ದರದ ಟೆಂಡರ್‌ಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೊಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಮೊಹರಾದ ಲಕೋಟೆಯನ್ನು ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 14.06.2005 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ಟೆಂಡರನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರು ಕರೆ ಸಂಖ್ಯೆ :: ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ + ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ರಾಹೆ-63 ರ ಅಂಕೋಲಾ-ಗುತ್ತಿ ರಸ್ತೆ ಕಿಮೀ. 309.250ರ ಸೇತುವೆಯ (ಸಿ.ಡಿ. ನಂ.310/ಏ) ಮರು ನಿರ್ಮಾಣ ಮತ್ತು ಕಾಮಗಾರಿ. | ರೂ. 23.00 ಲಕ್ಷಗಳು | ರೂ. 23,000/- | ರೂ. 3,000 + 12.5% ವ್ಯಾಟ್ | ಸೇತುವೆ ಮರು ನಿರ್ಮಾಣ ಕಾಮಗಾರಿ | 9 ತಿಂಗಳು (ಮಳೆಗಾಲ ಸಹಿತ) |

**ಷರತ್ತುಗಳು:**

1. ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ

ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು, ಗುತ್ತಿಗೆದಾರರು ನೊಂದಾವಣಿ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಇಲಾಖೆಯಿಂದ ಪಡೆದು ಸಲ್ಲಿಸತಕ್ಕದ್ದು. ಹಾಗೂ ಕಾಮಗಾರಿಗೆ ಬೇಕಾದ ಯಂತ್ರೋಪಕರಣಗಳ ಮಾಲೀಕತ್ವದ ದಾಖಲಾತಿಗಳ ದೃಢೀಕೃತ ಜೆರಾಕ್ಸ್ ಪ್ರತಿಗಳನ್ನು ಕಡ್ಡಾಯವಾಗಿ ಸಲ್ಲಿಸಬೇಕು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2. **ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.**

| | | | |
|---|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿಸಲ್ಲಿಸುವ ಕೊನೆಯ ದಿನಾಂಕ: | : | 23.05.2005 (ಕಛೇರಿ ವೇಳೆಯಲ್ಲಿ) |
| ಆ) | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: | : | 06.06.2005 ರಿಂದ 07.06.2005 ರವರೆಗೆ (ಕಛೇರಿ ವೇಳೆಯಲ್ಲಿ) |
| ಇ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ: | : | 14.06.2005, ಮಧ್ಯಾಹ್ನ 4.00 ಗಂಟೆಯ ವರೆಗೆ ಅಥವಾ ಆನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ) | ಟೆಂಡರ್‌ಗಳನ್ನು ತೆರೆಯುವ ದಿನಾಂಕ | : | 14.06.2005, ಸಾಯಂಕಾಲ 5.00 ಅಥವಾ ಆನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |

**ಟೆಂಡರ್‌ಗಳಿಗೆ ಷರತ್ತುಗಳು:**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ:ಎಫ್:ಡಿ.ಆರ್: ಪೇ ಆರ್ಡರ್: ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ಅನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ.-66 ದಕ್ಕೆ ಅನುಗುಣವಾಗಿರತಕ್ಕದ್ದು.
2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು: ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ: ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ: ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.
3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ಟೆಂಡರ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರಮ ಸಂಖ್ಯೆ | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1) | ಹಾಟ್‌ಮಿಕ್ಸ್ ಪ್ಲಾಂಟ್ 40/60 ಟಿ.ಪಿ.ಹೆಚ್. ಕೆಪಾಸಿಟಿ | ಒಂದು (1) | ಖರೀದಿಸಿದ ಇನ್‌ವಾಯ್ಸ್: ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2) | ಪೇವರ್ ಫಿನೀಷರ್ | ಒಂದು (1) | ಸದರಿ |
| 3) | ಕಾಂಕ್ರೀಟ್ ಬ್ಯಾಚ್ ಮಿಕ್ಸಿಂಗ್ ಪ್ಲಾಂಟ್ | ಒಂದು (1) | ಸದರಿ |
| 4) | ವೈಬ್ರೇಟರ್ | ಎರಡು (2) | ಸದರಿ |
| 5) | ಸ್ಟ್ಯಾಟಿಕ್ ರೋಡ್‌ರೋಲರ್ | ಒಂದು (1) | ಸದರಿ |
| 6) | ವೈಬ್ರೇಟರಿ ರೋಡ್ ರೋಲರ್ | ಒಂದು (1) | ಸದರಿ |
| 7) | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಒ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 8) | ಎಕ್ಸ್‌ಕವೇಟರ್ | ಒಂದು (1) | ಖರೀದಿಸಿದ ಇನ್‌ವಾಯ್ಸ್: ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 9) | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | ಸದರಿ |
| 10) | ಸೆಂಟ್ರಿಂಗ್ ಸಾಮಾಗ್ರಿಗಳು | ಕಾಮಗಾರಿಗೆ ಅವಶ್ಯವಿರುವಷ್ಟು | |

4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.

5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್‌ಅನ್ನು" ಕಡ್ಡಾಯವಾಗಿ ಟೆಂಡರ್ ಜೊತೆಯಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್‌ಅನ್ನು" ಸಲ್ಲಿಸದಿದ್ದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.
6. ಟೆಂಡರ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ಟೆಂಡರ್‌ಗಳನ್ನು ಅನರ್ಹಗೊಳಿಸಲಾಗುವುದು.
7. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ಟೆಂಡರಿನ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು: ಏಜೆನ್ಸಿಗಳು: ಸಂಸ್ಥೆಯ ಪ್ರೊಫೈಲ್ ಅನ್ನು ಲಗತ್ತಿಸತಕ್ಕದ್ದು.
8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರಶೆಟ್ಟಿ**

ಪಿ.ಆರ್.274 ಕಾರ್ಯಪಾಲಕ ಅಭಿಯಂತರು, ರಾ.ಹೆ. ವಿಭಾಗ, ಚಿತ್ರದುರ್ಗ.

## ಕರ್ನಾಟಕ ವಿಧಾನಸಭೆಯ ಸಚಿವಾಲಯ

**ವಿಧಾನ ಸೌಧ, ಅಂಚೆ ಪೆಟ್ಟಿಗೆ ಸಂಖ್ಯೆ:5074, ಬೆಂಗಳೂರು-560 001**

## ಟೆಂಡರ್ ಪ್ರಕಟಣೆ

**ಸಂಖ್ಯೆ: ಶಾಭ/178/ ಉಮಟೆಂ/2005, ದಿನಾಂಕ 13ನೇ ಮೇ 2005**

ಕರ್ನಾಟಕ ವಿಧಾನಸಭೆಯ ಸಚಿವಾಲಯದ ಶಾಸಕರ ಭವನದಲ್ಲಿ ಉಪಹಾರ ಮಂದಿರವನ್ನು ನಡೆಸಲು ಅರ್ಹರಿಂದ ಟೆಂಡರ್ ಆಹ್ವಾನಿಸಲಾಗಿದೆ. (ಸ್ಥಳೀಯ ಪ್ರಚಲಿತ ತಿಂಡಿ ತಿನಿಸುಗಳ ಜೊತೆಗೆ ಉತ್ತರ ಕರ್ನಾಟಕದ ತಿಂಡಿ ತಿನಿಸುಗಳನ್ನೂ ಒಳಗೊಂಡಂತೆ)

ಆದ್ದರಿಂದ ಇಚ್ಛೆಯುಳ್ಳವರಿಂದ ಅರಗು ಮೊಹರಾದ ಟೆಂಡರುಗಳನ್ನು ಈ ಕೆಳಕಂಡ ನಿಬಂಧನೆ:ಷರತ್ತುಗಳೊಂದಿಗೆ ಆಹ್ವಾನಿಸಲಾಗಿದೆ.

1. ಅರಗು ಮೊಹರಾದ ಟೆಂಡರ್ ಗಳನ್ನು ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆಯ ಸಚಿವಾಲಯ, ಕೊಠಡಿ ಸಂಖ್ಯೆ 124, ಮೊದಲನೇ ಮಹಡಿ, ವಿಧಾನ ಸೌಧ, ಬೆಂಗಳೂರು-560 001, ಇವರಿಗೆ ದಿನಾಂಕ 03-06-2005 ರಂದು ಸಂಜೆ 4-00 ಗಂಟೆಯೊಳಗಾಗಿ ಸಲ್ಲಿಸಬಹುದಾಗಿದೆ.
2. ಟೆಂಡರ್‌ಗಳನ್ನು ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ 06-06-2005ರಂದು ಮಧ್ಯಾಹ್ನ 3-00 ಗಂಟೆಗೆ ಕಾರ್ಯದರ್ಶಿಯವರ ಕೊಠಡಿಯಲ್ಲಿ ತೆರೆಯಲಾಗುವುದು. ನಿಗಧಿತ ಟೆಂಡರ್ ದಿನಾಂಕದಂದು ಆಕಸ್ಮಿಕವಾಗಿ ಸಾರ್ವಜನಿಕ ರಜೆ ಎಂದು ಘೋಷಿಸಲ್ಪಟ್ಟಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.
3. ಟೆಂಡರ್ ಫಾರಂಗಳನ್ನು ಕ್ಷೇತ್ರಾಧಿಕಾರಿ, ಶಾಸಕರ ಭವನ, ಇವರ ಕಛೇರಿಯಲ್ಲಿ ಟೆಂಡರ್ ಪ್ರಕಟಣೆಯ ದಿನಾಂಕದಿಂದ 03-06-2005 ರವರೆಗೆ ಬೆಳಿಗ್ಗೆ 10-00 ಗಂಟೆಯಿಂದ ಮಧ್ಯಾಹ್ನ 1-30 ಗಂಟೆಯವರೆಗೆ ಪಡೆಯಬಹುದಾಗಿದೆ.
4. ಟೆಂಡರ್‌ನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ಅಧಿಕಾರ ಕರ್ನಾಟಕ ವಿಧಾನಸಭೆಯ ಅಧ್ಯಕ್ಷರಿಗೆ ಇರುತ್ತದೆ.
5. ಟೆಂಡರ್ ವಿಷಯದಲ್ಲಿ ವಿವಾದ ಉಂಟಾದಲ್ಲಿ ಕರ್ನಾಟಕ ವಿಧಾನಸಭೆಯ ಮಾನ್ಯ ವಿಧಾನಸಭಾಧ್ಯಕ್ಷರ ತೀರ್ಮಾನ ಅಂತಿಮವಾಗಿರುತ್ತದೆ.
6. ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಗುತ್ತಿಗೆದಾರರು ಇತ್ತೀಚಿನ ಸೇಲ್ಸ್ ಟ್ಯಾಕ್ಸ್ ಮತ್ತು ಇನ್‌ಕಂಟ್ಯಾಕ್ಸ್ ಸರ್ಟಿಫಿಕೇಟ್ ಲಗತ್ತಿಸಬೇಕು.
7. ಯಶಸ್ವಿ ಟೆಂಡರುದಾರರು ಕ್ಯಾಂಟಿನ್ ನಡೆಸುವ ಸ್ಥಳಕ್ಕೆ ರೂ. 30,000-00 (ಮುವತ್ತು ಸಾವಿರ ಮಾತ್ರ)ಗಳ ಮುಂಗಡ ಠೇವಣಿ ಹಣ ಮತ್ತು ಮಾಸಿಕ ರೂ. 4,000-00 (ನಾಲ್ಕು ಸಾವಿರ ಮಾತ್ರ)ಗಳ ಬಾಡಿಗೆಯನ್ನು ನೀಡಲು ಬದ್ದರಿರಬೇಕು.
8. ವಿದ್ಯುಚ್ಛಕ್ತಿ ಹಾಗೂ ನೀರಿನ ಬಳಕೆಗೆ ಸಂಬಂಧಪಟ್ಟಂತೆ ಪ್ರತ್ಯೇಕವಾಗಿ ಪ್ರತಿ ತಿಂಗಳು ಮೀಟರ್ ಆಧಾರದ ಮೇಲೆ ನಿಗದಿತ ಅವಧಿಯಲ್ಲಿ ಯಶಸ್ವಿ ಟೆಂಡರುದಾರರೇ ಭರಿಸತಕ್ಕದ್ದು.
9. ಟೆಂಡರುದಾರರು ಪಾರದರ್ಶಕ ನಿಯಮ 1999ರ ಅನ್ವಯ ದ್ವಿಲಕೋಟೆ ಪದ್ಧತಿಯಲ್ಲಿ ತಮ್ಮ ದರಗಳನ್ನು ಏಕ ಕಾಲಕ್ಕೆ ಅರಗು ಮೊಹರು ಮಾಡಿದ ಲಕೋಟೆಯಲ್ಲಿ ಸಲ್ಲಿಸತಕ್ಕದ್ದು. ಅರಗು ಮೊಹರಾದ ಒಂದನೇ ಲಕೋಟೆಯಲ್ಲಿ ಅವಶ್ಯಕ ದಾಖಲಾತಿಗಳು ಇರತಕ್ಕದ್ದು. ಅರಗು ಮಾಡಿದ 2ನೇ ಲಕೋಟೆಯಲ್ಲಿ ನಿಗದಿತ ನಮೂನೆಯ ಫಾರಂಗಳಲ್ಲಿ ಇತರೆ ವಿವರಗಳೊಂದಿಗೆ ದರವನ್ನು ಅಂಕಿಯಲ್ಲಿ ಹಾಗೂ ದಪ್ಪ ಅಕ್ಷರಗಳಲ್ಲಿ ನಮೂದಿಸಿ ಸಲ್ಲಿಸತಕ್ಕದ್ದು. ಟೆಂಡರ್ ಸಲ್ಲಿಸುವ

ಮೊದಲನೇ ಲಕೋಟೆಯಲ್ಲಿ ಲಕೋಟೆಯ ಮೇಲೆ ಅವಶ್ಯಕ ದಾಖಲಾತಿಗಳ ಲಕೋಟೆ-1 ಎಂದು ನಮೂದಿಸತಕ್ಕದ್ದು. ಟೆಂಡರ್ ಬಾಬ್ತು ಸಲ್ಲಿಸುವ 2ನೇ ಲಕೋಟೆಯ ಮೇಲೆ ದರ ಸೂಚಿಸುವ ಲಕೋಟೆ-2 ಎಂದು ನಮೂದಿಸತಕ್ಕದ್ದು.

10. ಹೆಚ್ಚಿನ ವಿವರಗಳನ್ನು ಜಂಟಿ ಕಾರ್ಯದರ್ಶಿ-1, ಕರ್ನಾಟಕ ವಿಧಾನಸಭೆಯ ಸಚಿವಾಲಯ, ಕೊಠಡಿ ಸಂಖ್ಯೆ-124, ವಿಧಾನ ಸೌಧ, ಬೆಂಗಳೂರು ಇವರ ಕಛೇರಿಯಲ್ಲಿ ಕೆಲಸದ ದಿನಗಳಲ್ಲಿ ಪಡೆಯಬಹುದಾಗಿರುತ್ತದೆ.
11. ಉಪಹಾರ ಮಂದಿರದ ಆವರಣ ಮತ್ತು ಅದರ ಸುತ್ತಮುತ್ತ ವಾತಾವರಣವನ್ನು ಕಲುಷಿತಗೊಳಿಸದೆ ಉತ್ತಮ ಪರಿಸರವನ್ನು ಕಾಪಾಡಿಕೊಂಡು ಬರಲು ಬದ್ದರಿರಬೇಕು.
12. ವಿಧಾನಸಭೆ ಸಚಿವಾಲಯದ ಸಿಬ್ಬಂದಿಗೆ ಸಾರ್ವಜನಿಕರಿಗೆ ವಿಧಿಸುವ ಶೇಕಡಾ 40ರಷ್ಟು ರಿಯಾಯಿತಿ ದರದಲ್ಲಿ ತಿಂಡಿ ತಿನಿಸುಗಳನ್ನು ಒದಗಿಸಲು ಬದ್ಧರಾಗಿರತಕ್ಕದ್ದು.
13. ತಿಂಡಿ ತಿನಿಸುಗಳ, ಸ್ಥಳೀಯ ತಿಂಡಿ ತಿನಿಸುಗಳ ಜೊತೆಗೆ ಉತ್ತರ ಕರ್ನಾಟಕದ ತಿಂಡಿ ತಿನಿಸುಗಳನ್ನೂ ಒಳಗೊಂಡಂತೆ ವಿವರವಾದ ದರಪಟ್ಟಿಯನ್ನು ಸಲ್ಲಿಸುವುದು.
14. ಒಂದು ವೇಳೆ ಉಪಹಾರ ಮಂದಿರದಲ್ಲಿ ಒದಗಿಸುವ ಉಪಹಾರದ ಗುಣಮಟ್ಟದಲ್ಲಿ ಯಾವುದೇ ನ್ಯೂನತೆ ಕಂಡು ಬಂದಲ್ಲಿ ಸೂಚನೆ ನೀಡದೆ ಅಂದಿನಿಂದಲೇ ಉಪಹಾರ ಮಂದಿರದ ಪರವಾನಿಗೆಯನ್ನು ರದ್ದುಪಡಿಸಲಾಗುವುದು.
15. ಯಶಸ್ವಿ ಟೆಂಡರುದಾರರು ಉಪಹಾರ ಮಂದಿರದಲ್ಲಿ ಶಾಸಕರ ಭವನದಿಂದ ಒದಗಿಸುವ ಪೀಠೋಪಕರಣಗಳು ಮತ್ತು ನಿಗದಿತ ಜೋಡಣೆಗಳು (furnitures & fixtures) ಳನ್ನು ಸುಸ್ಥಿತಿಯಲ್ಲಿ ಇರಿಸಿ ಟೆಂಡರ್ ಅವಧಿಯ ನಂತರ ಅವನ್ನು ಶಾಸಕರ ಭವನಕ್ಕೆ ವಾಪಸ್ಸು ಮಾಡತಕ್ಕದ್ದು.
16. ಟೆಂಡರ್‌ನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ಅಧಿಕಾರ ಕರ್ನಾಟಕ ವಿಧಾನಸಭೆಯ ಅಧ್ಯಕ್ಷರಿಗೆ ಇರುತ್ತದೆ. ಟೆಂಡರ್ ವಿಷಯದಲ್ಲಿ ವಿವಾದ ಉಂಟಾದಲ್ಲಿ ಕರ್ನಾಟಕ ವಿಧಾನಸಭೆಯ ಮಾನ್ಯ ವಿಧಾನಸಭಾದ್ಯಕ್ಷರ ತೀರ್ಮಾನ ಅಂತಿಮವಾಗಿರುತ್ತದೆ.
17. ಟೆಂಡರುಗಳನ್ನು ಅನುಮೋದಿಸಿದ್ದಲ್ಲಿ ಟೆಂಡರ್‌ದಾರರು ಗೊತ್ತುಪಡಿಸಿರುವ ದರದಲ್ಲಿಯೇ ಗೊತ್ತುಪಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಉಪಹಾರ ಮಂದಿರ ನಡೆಸಲು ಬದ್ದರಿರಬೇಕು

**ಟಿ.ಎನ್.ಧ್ರುವಕುಮಾರ್**
ಜಂಟಿ ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆಯ ಸಚಿವಾಲಯ

**ಟೆಂಡರ್ ನಮೂನೆ**

**ಸಂಖ್ಯೆ: ಶಾಭ/178/ಉಮಂಟೆಂ/2005, ದಿನಾಂಕ 13ನೇ ಮೇ 2005**

**ಟೆಂಡರ್ ನಮೂನೆ ಸಂಖ್ಯೆ:01**

**ವಿಷಯ:** ಕರ್ನಾಟಕ ವಿಧಾನ ಸಭೆಯ ಸಚಿವಾಲಯದ ಶಾಸಕರ ಭವನದಲ್ಲಿ ಉಪಹಾರ ಮಂದಿರವನ್ನು (ಉತ್ತರ ಕರ್ನಾಟಕದ ತಿಂಡಿ ತಿನಿಸುಗಳನ್ನು ಒಳಗೊಂಡಂತೆ) ನಡೆಸಲು ಅರ್ಹ ಟೆಂಡರುದಾರರಿಂದ ಟೆಂಡರ್ ಆಹ್ವಾನಿಸಲಾಗಿದೆ.

| | |
|---|---|
| ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ | : ಜಂಟಿ ಕಾರ್ಯದರ್ಶಿ-1<br>ಕರ್ನಾಟಕ ವಿಧಾನಸಭೆಯ ಸಚಿವಾಲಯ<br>ಕೊಠಡಿ ಸಂಖ್ಯೆ: 124, ಮೊದಲನೇ ಮಹಡಿ,<br>ವಿಧಾನ ಸೌಧ, ಬೆಂಗಳೂರು-560 001. |
| ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ | : 03-06-2005 ಮಧ್ಯಾಹ್ನ 3-00ಗಂಟೆಯೊಳಗೆ |
| ಟೆಂಡರ್ ತೆರೆಯುವ ದಿನಾಂಕ | : 06-06-2005 ಮಧ್ಯಾಹ್ನ 4-30 ಗಂಟೆಗೆ<br>ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ<br>ಸಾರ್ವತ್ರಿಕ ರಜಾ ದಿನವಾದಲ್ಲಿ ಮೊದಲನೆ<br>ಕೆಲಸದ ದಿನ ಅದೇ ವೇಳೆ ಮತ್ತು ಅದೇ<br>ಸ್ಥಳದಲ್ಲಿ ತೆರೆಯಲಾಗುವುದು. |
| ಟೆಂಡರ್ ಫಾರಂ ದರ | : ರೂ.100-00ಗಳು<br>(ಒಂದು ನೂರು ರೂಪಾಯಿಗಳು ಮಾತ್ರ) |

## ಟೆಂಡರ್‌ದಾರರ ಗಮನಕ್ಕೆ

1. ಟೆಂಡರ್ ಲಕೋಟೆಯ ಮೇಲೆ ಉಪಹಾರ ಮಂದಿರ (ಸ್ಥಳೀಯ ಪ್ರಚಲಿತ ತಿಂಡಿ ತಿನಿಸುಗಳ ಜೊತೆಗೆ ಉತ್ತರ ಕರ್ನಾಟಕದ ತಿಂಡಿ ತಿನಿಸುಗಳನ್ನು ಒಳಗೊಂಡಂತೆ) ನಡೆಸುವ ಬಗ್ಗೆ ಟೆಂಡರ್ ಎಂದು ಸ್ಪಷ್ಟವಾಗಿ ತಿಳಿಸಿರಬೇಕು. ಹಾಗೂ ಟೆಂಡರ್ ಪ್ರಕಟಣೆಯ ಸಂಖ್ಯೆ, ದಿನಾಂಕ, ಕಡ್ಡಾಯವಾಗಿ ನಮೂದಿಸಬೇಕು.
2. ಟೆಂಡರುದಾರರು ತಿಂಡಿ ತಿನಿಸುಗಳ ಉಪಹಾರ ಮಂದಿರವನ್ನು ನಡೆಸಲು ನೊಂದಾಯಿಸಿಕೊಂಡಿರಬೇಕು.
3. ವಿಧಾನಸಭೆ ಸಚಿವಾಲಯದ ಸಿಬ್ಬಂದಿಗೆ ಸಾರ್ವಜನಿಕರಿಗೆ ವಿಧಿಸುವ ಶೇಕಡಾ 40ರಷ್ಟು ರಿಯಾಯಿತಿ ದರದಲ್ಲಿ ತಿಂಡಿ ತಿನಿಸುಗಳನ್ನು ಒದಗಿಸಲು ಬದ್ಧರಾಗಿರತಕ್ಕದ್ದು.
4. ಉಪಹಾರ ಮಂದಿರವನ್ನು ನಡೆಸುವಲ್ಲಿ ಟೆಂಡರುದಾರರು ಎಷ್ಟು ವರ್ಷಗಳ ಕಾಲ ಅನುಭವವನ್ನು ಹೊಂದಿರುತ್ತಾರೆ ಎಂಬುದರ ಬಗ್ಗೆ ವಿವರ ನೀಡುವುದು.
5. ಉಪಹಾರ ಮಂದಿರದಲ್ಲಿ ಉತ್ತಮ ಗುಣಮಟ್ಟದ ತಿಂಡಿ ತಿನಿಸುಗಳನ್ನು ಒದಗಿಸಲು ಬದ್ದರಿರಬೇಕು. ಹಾಗೂ ಉತ್ತರ ಕರ್ನಾಟಕದ ತಿಂಡಿ ತಿನಿಸುಗಳನ್ನು ತಯಾರಿಸಿ ಒದಗಿಸಲು ಬದ್ದರಿರಬೇಕು.
6. ಉಪಹಾರ ಮಂದಿರದ ಆವರಣ ಮತ್ತು ಅದರ ಸುತ್ತಮುತ್ತ ವಾತಾವರಣವನ್ನು ಕಲುಷಿತಗೊಳಿಸದೆ ಉತ್ತಮ ಪರಿಸರವನ್ನು ಕಾಪಾಡಿಕೊಂಡು ಬರಲು ಬದ್ದರಿರಬೇಕು.
7. ತಿಂಡಿ ತಿನಿಸುಗಳ, ಸ್ಥಳೀಯ ತಿಂಡಿ ತಿನಿಸುಗಳ ಜೊತೆಗೆ ಉತ್ತರ ಕರ್ನಾಟಕದ ತಿಂಡಿ ತಿನಿಸುಗಳನ್ನೂ ಒಳಗೊಂಡಂತೆ ವಿವರವಾದ ದರಪಟ್ಟಿಯನ್ನು ಸಲ್ಲಿಸುವುದು.
8. ಯಶಸ್ವಿ ಟೆಂಡರುದಾರರು ಕ್ಯಾಂಟಿನ್ ನಡೆಸುವ ಸ್ಥಳಕ್ಕೆ ರೂ. 30,000-00 (ಮುವತ್ತು ಸಾವಿರ ಮಾತ್ರ)ಗಳ ಮುಂಗಡ ಠೇವಣಿ ಹಣ ಮತ್ತು ಮಾಸಿಕ ರೂ. 4,000-00 (ನಾಲ್ಕು ಸಾವಿರ ಮಾತ್ರ)ಗಳ ಬಾಡಿಗೆಯನ್ನು ನೀಡಲು ಬದ್ದರಿರಬೇಕು.
9. ಉಪಹಾರ ಮಂದಿರದ ಸ್ಥಳಕ್ಕೆ ಪ್ರತ್ಯೇಕವಾಗಿ ವಿದ್ಯುಚ್ಚಕ್ತಿ ಮತ್ತು ನೀರಿನ ಸರಬರಾಜು ಮೀಟರುಗಳನ್ನು ಅಳವಡಿಸಲಾಗಿದ್ದು, ಮಾಸಿಕ ತಗಲುವ ವಿದ್ಯುಚ್ಚಕ್ತಿ ಮತ್ತು ನೀರಿನ ಬಿಲ್ಲುಗಳನ್ನು ಸಮಯಕ್ಕೆ ಸರಿಯಾಗಿ ಸಂಬಂಧಪಟ್ಟ ಇಲಾಖೆಗೆ ಪಾವತಿ ಮಾಡಲು ಬದ್ದರಿರಬೇಕು.
10. ಯಶಸ್ವಿ ಟೆಂಡರುದಾರರು ಮುಂಗಡ ಠೇವಣಿ ಮೊತ್ತ ರೂ. 30,000 (ಮುವತ್ತು ಸಾವಿರ ಮಾತ್ರ)ಗಳನ್ನು ಡಿ.ಡಿ. ಮುಖಾಂತರ ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಪಡೆದು, ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆಯ ಸಚಿವಾಲಯ, ವಿಧಾನ ಸೌದ, ಬೆಂಗಳೂರು ಇವರಿಗೆ ಸಂಬೋಧಿಸಿ ಲಗತ್ತಿಸತಕ್ಕದ್ದು.
11. ಒಂದು ವೇಳೆ ಉಪಹಾರ ಮಂದಿರದಲ್ಲಿ ಒದಗಿಸುವ ಉಪಹಾರದ ಗುಣಮಟ್ಟದಲ್ಲಿ ಯಾವುದೇ ನ್ಯೂನತೆ ಕಂಡು ಬಂದಲ್ಲಿ ಸೂಚನೆ ನೀಡದೆ ಅಂದಿನಿಂದಲೇ ಉಪಹಾರ ಮಂದಿರದ ಪರವಾನಿಗೆಯನ್ನು ರದ್ದುಪಡಿಸಲಾಗುವುದು.
12. ಟೆಂಡರ್‌ನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ಅಧಿಕಾರ ಕರ್ನಾಟಕ ವಿಧಾನಸಭೆಯ ಅಧ್ಯಕ್ಷರಿಗೆ ಇರುತ್ತದೆ. ಟೆಂಡರ್ ವಿಷಯದಲ್ಲಿ ವಿವಾದ ಉಂಟಾದಲ್ಲಿ ಕರ್ನಾಟಕ ವಿಧಾನಸಭೆಯ ಮಾನ್ಯ ವಿಧಾನಸಭಾದ್ಯಕ್ಷರ ತೀರ್ಮಾನ ಅಂತಿಮವಾಗಿರುತ್ತದೆ.

**ಟಿ.ಎಸ್.ಧ್ರುವಕುಮಾರ್**

PR-275

ಜಂಟಿ ಕಾರ್ಯದರ್ಶಿ

ಕರ್ನಾಟಕ ವಿಧಾನಸಭೆಯ ಸಚಿವಾಲಯ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಟೆಂಡರ್ ಅಧಿಸೂಚನೆ ಸಂಖ್ಯೆ: ಸಿಆಸುಇ 8 ಡಿಎಸ್‌ಡಬ್ಲ್ಯೂ 2005, ದಿನಾಂಕ: 7ನೇ ಮೇ 2005

**ವಿಷಯ :** ವಿಧಾನಸೌಧ ಮತ್ತು ಬಹುಮಹಡಿ ಕಟ್ಟಡಗಳಲ್ಲಿ ಸಚಿವಾಲಯ ಉಪಾಹಾರ ಮಂದಿರವನ್ನು ನಡೆಸುವ ಬಗ್ಗೆ.

ಟೆಂಡರ್‌ಗಳನ್ನು ಸಲ್ಲಿಸಬೇಕಾದ ವಿಳಾಸ : ಸರ್ಕಾರದ ಅಧೀನ ಕಾರ್ಯದರ್ಶಿ ಸಿಆಸುಇ (ಕಾರ್ಯಕಾರಿ-1) ಕೊಠಡಿ ಸಂಖ್ಯೆ: 23, ನೆಲಮಹಡಿ ವಿಧಾನಸೌಧ, ಬೆಂಗಳೂರು-560 001

ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ : 9-6-2005 ರ ಮಧ್ಯಾಹ್ನ 3-00 ಗಂಟೆವರೆಗೆ

ಟೆಂಡರ್ ನಮೂನೆಯ ದರ : ರೂ. 500 + 63 ಮೌಲ್ಯವರ್ಧಿತ ತೆರಿಗೆ = ಒಟ್ಟು ರೂ. 563/-

1) ಕರ್ನಾಟಕ ಸರ್ಕಾರ ಸಚಿವಾಲಯ ಉಪಾಹಾರ ಮಂದಿರವನ್ನು ವಿಧಾನಸೌಧ ಮತ್ತು ಬಹುಮಹಡಿ ಕಟ್ಟಡದಲ್ಲಿ ನಡೆಸಲು ಪ್ರತ್ಯೇಕ ಟೆಂಡರ್‌ಗಳನ್ನು ಸಲ್ಲಿಸತಕ್ಕದ್ದು.

2) ಎರಡೂ ಸ್ಥಳಗಳಲ್ಲಿ ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛಿಸುವವರು ಎರಡು ಪ್ರತ್ಯೇಕ ಟೆಂಡರ್‌ಗಳನ್ನು ಸಲ್ಲಿಸತಕ್ಕದ್ದು. ಒಂದೇ ಸ್ಥಳದಲ್ಲಿ ಉಪಾಹಾರ ಮಂದಿರವನ್ನು ನಡೆಸಲು ಇಚ್ಛೆಪಡುವವರು ಒಂದೇ ಟೆಂಡರ್‌ನ್ನು ಮಾತ್ರ ಸಲ್ಲಿಸಬಹುದಾಗಿದೆ.

3) ವಿಧಾನಸೌಧದ ಉಪಾಹಾರ ಮಂದಿರವನ್ನು ನಡೆಸಲು ಟೆಂಡರ್ ಸಲ್ಲಿಸುವವರು ಟೆಂಡರ್‌ನೊಂದಿಗೆ ರೂಪಾಯಿ ಒಂದು ಲಕ್ಷಕ್ಕೆ ಮುಂಗಡ ಠೇವಣಿ ಹಣಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸಲ್ಲಿಸತಕ್ಕದ್ದು.

4) ಬಹುಮಹಡಿ ಕಟ್ಟಡದಲ್ಲಿ ಉಪಾಹಾರ ಮಂದಿರವನ್ನು ನಡೆಸಲು ಟೆಂಡರ್ ಸಲ್ಲಿಸುವವರು ಟೆಂಡರ್‌ನೊಂದಿಗೆ ರೂಪಾಯಿ ಮೂರು ಲಕ್ಷಕ್ಕೆ ಮುಂಗಡ ಠೇವಣಿ ಹಣಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸಲ್ಲಿಸತಕ್ಕದ್ದು.

5) ಈ ಬ್ಯಾಂಕ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಇವರ ಹೆಸರಿಗೆ ಬರೆಯತಕ್ಕದ್ದು

6) ಮುಂಗಡ ಠೇವಣಿ ಹಣದ ಸಂಬಧ ಬ್ಯಾಂಕ್ ಡ್ರಾಫ್ಟ್‌ನ್ನು ಟೆಂಡರ್ ಜೊತೆಗೆ ಸಲ್ಲಿಸದಿದ್ದಲ್ಲಿ ನೀಡಿರುವ ಟೆಂಡರ್‌ನ್ನು ತಿರಸ್ಕರಿಸಲಾಗುವುದು

7) ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 9.6.2005 ರ ಮಧ್ಯಾಹ್ನ 3-00 ಗಂಟೆಯೊಳಗೆ. ಮೊಹರು ಮಾಡಿದ ಲಕೋಟೆಗಳನ್ನು ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು.

8) ಅದೇ ದಿನ ಮಧ್ಯಾಹ್ನ 3-30 ಗಂಟೆಗೆ ಸರಿಯಾಗಿ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆ.ಸು) ಬಹುಮಹಡಿ ಕಟ್ಟಡ, 5ನೇ ಹಂತ, 1ನೇ ಮಹಡಿ, ಇವರ ಕೊಠಡಿಯಲ್ಲಿ ಟೆಂಡರ್‌ನ್ನು ತೆರೆಯಲಾಗುವುದು. ಟೆಂಡರನ್ನು ತೆರೆಯುವ ಸಮಯದಲ್ಲಿ ಟೆಂಡರ್‌ದಾರರು ಅಥವಾ ಅವರ ಅಧಿಕೃತ ಪ್ರತಿನಿಧಿ ಹಾಜರಿರಬಹುದು.

9) ಟೆಂಡರ್ ನಮೂನೆಯ ದರ ರೂ. 563-00 ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಇವರ ಹೆಸರಿಗೆ ಪಡೆದುಕೊಂಡು, ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1) ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು ಇಲ್ಲಿಂದ ಪಡೆಯಬಹುದಾಗಿದೆ. ಟೆಂಡರ್‌ನ್ನು ಒಪ್ಪಿಕೊಳ್ಳುವ ಅಂತಿಮ ಅಧಿಕಾರವನ್ನು ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) ಇವರು ಹೊಂದಿರುತ್ತಾರೆ

10) ಈ ಉಪಾಹಾರ ಮಂದಿರಗಳನ್ನು ಆದೇಶ ಹೊರಡಿಸಿದ ದಿನಾಂಕದಿಂದ 1 (ಒಂದು) ವರ್ಷದ ಅವಧಿಗೆ ನಡೆಸಲು ಅನುಮತಿ ನೀಡಲಾಗುವುದು. ಯಾವುದೇ ಹಂತದಲ್ಲೂ 30 ದಿನಗಳ ನೋಟೀಸ್ ನೀಡುವ ಮೂಲಕ ಗುತ್ತಿಗೆಯನ್ನು ರದ್ದುಗೊಳಿಸುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಆದಾಗ್ಯೂ, ಈ ಗುತ್ತಿಗೆ ಅವಧಿಯು ರಾಜ್ಯ ಸರ್ಕಾರವು ಸರ್ವೋಚ್ಚ ನ್ಯಾಯಾಲಯದಲ್ಲಿ ಹೂಡಿರುವ ಸ್ಪೆಷಲ್ ಲೀವ್ ಪಿಟಿಷನ್‌ಗಳ ಮೇಲೆ ಸದರಿ ನ್ಯಾಯಾಲಯವು ನೀಡುವ ತೀರ್ಪಿಗೆ ಒಳಪಟ್ಟಿರುತ್ತದೆ.

11) ಪ್ರತ್ಯೇಕ/ಸದರಿ ಟೆಂಡರ್‌ಗಳ ಮೇಲೆ "ಕರ್ನಾಟಕ ಸರ್ಕಾರ ಸಚಿವಾಲಯದ ವಿಧಾನಸೌಧ ಉಪಾಹಾರ ಮಂದಿರ" ಅಥವಾ "ಕರ್ನಾಟಕ ಸರ್ಕಾರ ಸಚಿವಾಲಯದ ಬಹುಮಹಡಿ ಕಟ್ಟಡ ಉಪಾಹಾರ ಮಂದಿರ" ಎಂದು ನಮೂದಿಸಿರತಕ್ಕದ್ದು.

12) ಟೆಂಡರ್‌ದಾರರು ತನ್ನ ಟೆಂಡರ್‌ಗಳಿಗೆ ಪೂರ್ಣ ಹೆಸರಿನೊಂದಿಗೆ ಸಹಿ ಹಾಕಿರಬೇಕು. ಅದು ಒಂದು ಸಂಸ್ಥೆಯ ಪರವಾಗಿ ಹಾಕಿದಲ್ಲಿ, ವ್ಯವಸ್ಥಾಪಕ ಪಾಲುದಾರನ ಹೆಸರಿನೊಂದಿಗೆ ಸಹಿ ಹಾಕಿರಬೇಕು

13) ಪ್ರತಿಯೊಬ್ಬ ಟೆಂಡರುದಾರನು ತನ್ನ ವಾಸ ಸ್ಥಳ ಹಾಗೂ ಅಂಚೆ ವಿಳಾಸವನ್ನು ಸ್ಪಷ್ಟವಾಗಿ ಟೆಂಡರ್‌ನಲ್ಲಿ ನಮೂದಿಸತಕ್ಕದ್ದು

14) ಅಯಶಸ್ವಿ ಟೆಂಡರ್‌ದಾರರ ಮುಂಗಡ ಠೇವಣಿ ಹಣವನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು

15) ಯಶಸ್ವಿ ಟೆಂಡರ್‌ದಾರರ ಮುಂಗಡ ಹಣವನ್ನು ಭದ್ರತಾ ಠೇವಣಿಯನ್ನಾಗಿ ಪರಿಗಣಿಸಿ ಸರ್ಕಾರಿ ಲೆಕ್ಕಕ್ಕೆ ಜಮಾ ಮಾಡಲಾಗುವುದು. ಟೆಂಡರ್ ಅವಧಿ ಮುಗಿದ ನಂತರ ಸರ್ಕಾರಕ್ಕೆ ಟೆಂಡರುದಾರರಿಂದ ಯಾವುದೇ ಬಾಕಿ ಇಲ್ಲದಿದ್ದಲ್ಲಿ, ಭದ್ರತಾ ಠೇವಣಿಯನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.

16) ಟೆಂಡರುದಾರರು, ನಿಗದಿಪಡಿಸಿರುವ ಪ್ರತಿಯೊಂದು ಆಹಾರ ಪದಾರ್ಥಗಳು, ಕಾಫಿ, ಟೀ ಇತ್ಯಾದಿಗಳಿಗೆ ಟೆಂಡರ್ ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವ ದರ ಮತ್ತು ಪ್ರಮಾಣದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ, ಕರ್ನಾಟಕ ವಿಧಾನಸಭೆ ಸಚಿವಾಲಯ ಮತ್ತು ಕರ್ನಾಟಕ ವಿಧಾನ ಪರಿಷತ್ ಸಚಿವಾಲಯದ ನೌಕರರಿಗೆ ಸರಬರಾಜು ಮಾಡತಕ್ಕದ್ದು. ಇತರರಿಗೆ ಟೆಂಡರ್‌ದಾರರೇ ದರಗಳನ್ನು ನಿಗದಿಪಡಿಸಬಹುದು.

17) ವಿಧಾನಸೌಧದ ಉಪಾಹಾರ ಮಂದಿರಕ್ಕೆ ಸಂಬಂಧಿಸಿದಂತೆ ಕನಿಷ್ಠ ಮಾಸಿಕ ರೂ. 12,000/- ಬಾಡಿಗೆ ಮತ್ತು ಬಹುಮಹಡಿ ಕಟ್ಟಡದ ಉಪಾಹಾರ ಮಂದಿರಕ್ಕೆ ಸಂಬಂಧಿಸಿದಂತೆ ಕನಿಷ್ಠ ಮಾಸಿಕ ರೂ. 35,000/- ಬಾಡಿಗೆಯನ್ನು ನಿಗದಿಪಡಿಸಲಾಗಿದೆ. ಅದಕ್ಕಿಂತ ಕಡಿಮೆ ಬಾಡಿಗೆ ನಮೂದಿಸಿದಲ್ಲಿ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ.

18) ಯಶಸ್ವಿ ಟೆಂಡರ್‌ದಾರರು ಬೆಂಗಳೂರು ಮಹಾನಗರ ಪಾಲಿಕೆಯಿಂದ ಮತ್ತು ಸಂಬುಧಪಟ್ಟ ಸರ್ಕಾರಿ ಇಲಾಖೆಗಳು / ಸಂಸ್ಥೆಗಳಿಂದ ಉಪಾಹಾರ ಮಂದಿರವನ್ನು ನಡೆಸಲು ಪರವಾನಗಿ ಪತ್ರ ಹಾಗೂ ನಿರಾಕ್ಷೇಪಣ ಪತ್ರ (No objection certificate) ಇತ್ಯಾದಿ ಅವಶ್ಯಕ ದಾಖಲೆಗಳನ್ನು ಹಾಜರುಪಡಿಸತಕ್ಕದ್ದು.

19) ಯಶಸ್ವಿ ಟೆಂಡರ್‌ದಾರರು ಅಡುಗೆ ತಯಾರಿಸುವುದಕ್ಕಾಗಿ ಹಾಗೂ ಸರಬರಾಜು ಮಾಡುವುದಕ್ಕಾಗಿ ತಮ್ಮದೇ ಆದ ಅಡುಗೆ ಪಾತ್ರೆಗಳನ್ನು ಹಾಗೂ ಇತರೆ ವಸ್ತುಗಳನ್ನು ಒದಗಿಸಿಕೊಳ್ಳತಕ್ಕದ್ದು.

20) ಗೊತ್ತುಪಡಿಸಿದ ಅರ್ಜಿ ನಮೂನೆಯಲ್ಲಿ ಹಾಗೂ ನಿಗದಿತ ದಿನಾಂಕ ಮತ್ತು ಸಮಯದೊಳಗೆ ಸಲ್ಲಿಸದೇ ಇರುವ ಟೆಂಡರ್‌ನ್ನು ತಿರಸ್ಕರಿಸಲಾಗುವುದು

21) ದಿನಾಂಕ: 4.6.2005 ರ ಮಧ್ಯಾಹ್ನ 3-00 ಗಂಟೆವರೆಗೆ ಮಾತ್ರ ಈ ಟೆಂಡರ್ ಅರ್ಜಿಗಳನ್ನು ಮಾರಾಟ ಮಾಡಲಾಗುವುದು

22) ಗೊತ್ತುಪಡಿಸಿದ ನಮೂನೆಯ ನಿಗದಿತ ಪಟ್ಟಿಯಲ್ಲಿನ ಯಾವುದೇ ಮಾರ್ಪಾಡುಗಳನ್ನು ಮಾಡಿರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು

23) ಯಶಸ್ವಿ ಟೆಂಡರುದಾರರು ಕರಾರು ಒಪ್ಪಂದ ಪತ್ರವನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವಾರದೊಳಗೆ ನಿಗದಿತ ಮೌಲ್ಯದ ಛಾಪಾ ಕಾಗದದಲ್ಲಿ ಸಹಿ ಹಾಕಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಈ ಅವಧಿಯೊಳಗೆ ನಿಗದಿತ ಕರಾರು ಒಪ್ಪಂದ ಪತ್ರಕ್ಕೆ ಸಹಿ ಹಾಕಿ ಸಲ್ಲಿಸಲು ವಿಫಲರಾದಲ್ಲಿ ಅವರು ಸಲ್ಲಿಸಿರುವ ಮುಂಗಡ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು

24) ಐದು ವರ್ಷಕ್ಕೂ ಮೇಲ್ಪಟ್ಟು ಸರ್ಕಾರಿ ಇಲಾಖೆಗಳು/ಪ್ರಮುಖ ಸಂಸ್ಥೆಗಳಲ್ಲಿ ಉಪಾಹಾರ ಮಂದಿರವನ್ನು ನಡೆಸಿರುವ ಅನುಭವ ಇದ್ದು, ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ಪಾವತಿ ಮಾಡಿರುವಂತ ವ್ಯಕ್ತಿಗಳು ಹಾಗೂ ಸಂಸ್ಥೆಗಳ ಟೆಂಡರನ್ನು ಮಾತ್ರ ಸ್ವೀಕರಿಸಲಾಗುವುದು. ಈ ಬಗ್ಗೆ ಟೆಂಡರ್‌ದಾರರು ದಾಖಲೆಗಳೊಂದಿಗೆ ಸಂಪೂರ್ಣ ವಿವರ ನೀಡುವುದು

25) ಯಾವುದೇ ವ್ಯಾಜ್ಯ ಉಂಟಾದಲ್ಲಿ ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳಲು ಬೆಂಗಳೂರಿನಲ್ಲಿರುವ ನ್ಯಾಯಾಲಯಗಳಿಗೆ ಮಾತ್ರ ಅಧಿಕಾರ ಇದೆ.

26) ಸಚಿವಾಲಯ ಉಪಾಹಾರ ಮಂದಿರದ ಹಿಂದಿನ ಆಡಳಿತ ಮಂಡಳಿಯ ಅಧೀನದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ 62 ನೌಕರರ ಸೇವೆಯನ್ನು ಉಪಯೋಗಿಸಿಕೊಳ್ಳಲು ಮುಂದೆ ಬರುವ ಟೆಂಡರುದಾರರಿಗೆ ಆದ್ಯತೆ ನೀಡಲಾಗುವುದು

27) ಉಪಾಹಾರ ಮಂದಿರವನ್ನು ಸ್ವಚ್ಛವಾಗಿ ಇಡುವುದಲ್ಲದೇ, ಸೋಂಕು ರೋಗ, ಇಲಿ, ನೊಣ, ಸೊಳ್ಳೆ ಇತ್ಯಾದಿ ಸಮಸ್ಯೆಗಳು ಉಂಟಾಗದಂತೆ ದಿನಂಪ್ರತಿ ಔಷಧಿಯನ್ನು ಸಿಂಪಡಿಸತಕ್ಕದ್ದು

28) ಈ ಉಪಾಹಾರ ಮಂದಿರದಲ್ಲಿ ಆರೋಗ್ಯಕರವಾದ ಮತ್ತು ಶುಚಿ-ರುಚಿಯಾದ ತಿಂಡಿ-ತಿನಿಸುಗಳನ್ನು ತಯಾರಿಸತಕ್ಕದ್ದು

29) ಇಲ್ಲಿ ನೀಡುವ ತಿಂಡಿ-ತಿನಿಸು, ಆಹಾರ ಪದಾರ್ಥಗಳನ್ನು ತಿಂದು ಅಸ್ವಸ್ಥರಾದರೆ, ಅದರಿಂದ ಉಂಟಾಗುವ ಪರಿಣಾಮಗಳಿಗೆ ಉಪಾಹಾರ ಮಂದಿರದ ಮಾಲೀಕರೇ ಸಂಪೂರ್ಣ ಜವಾಬ್ದಾರರು

30) ಉಪಾಹಾರ ಮಂದಿರ ನಡೆಸುವಲ್ಲಿ ಸಂಪೂರ್ಣ ಜವಾಬ್ದಾರಿ ವಹಿಸಿಕೊಳ್ಳುವ ವ್ಯಕ್ತಿ ಮತ್ತು ಯಾವುದೇ ತಪ್ಪು ಕೆಲಸ, ಅವ್ಯವಸ್ಥಿತ ನಿರ್ವಹಣೆ ಅಥವಾ ಅಪಘಾತವಾದಲ್ಲಿ ಜವಾಬ್ದಾರಿ ಹೊತ್ತು ಸೂಕ್ತ ಪರಿಹಾರ ನೀಡುವ ಮಾಲೀಕರ / ಪಾಲುದಾರರ ಅಥವಾ ಸಂಸ್ಥೆಯ ಜವಾಬ್ದಾರಿಯುತ ಮಾಲೀಕರ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು.

31) ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.

32) ಬಹುಮಹಡಿ ಕಟ್ಟಡದ ಉಪಾಹಾರ ಮಂದಿರದ ಒಟ್ಟು ವಿಸ್ತೀರ್ಣ 317.24 sq.mtr. ವಿಧಾನಸೌಧದ ಉಪಾಹಾರ ಮಂದಿರದ ಒಟ್ಟು ವಿಸ್ತೀರ್ಣ 186.62 sq.mtr. ಬಹುಮಹಡಿ ಕಟ್ಟಡದ ಉಪಾಹಾರ ಮಂದಿರದಲ್ಲಿ ಸ್ವಲ್ಪ ಮಟ್ಟಿಗೆ ಮಾತ್ರ ತಕ್ಷಣಕ್ಕೆ ತಿಂಡಿಗಳನ್ನು ತಯಾರಿಸಲು ಅವಕಾಶವಿದೆ. ಪೂರ್ಣ ಪ್ರಮಾಣದ ಅಡುಗೆ ಕೋಣೆ ಇರುವುದಿಲ್ಲ. ವಿಧಾನಸೌಧದ ಉಪಾಹಾರ ಮಂದಿರದಲ್ಲಿ ಅಡುಗೆ ಮಾಡಲು ಅವಕಾಶ ಇರುವುದಿಲ್ಲ. ತಿಂಡಿ ಪದಾರ್ಥಗಳನ್ನು ಬೇರೆ ಕಡೆಯಿಂದ ಮಾಡಿ ಸಿಬ್ಬಂದಿ ವರ್ಗದವರಿಗೆ ಸರಬರಾಜು ಮಾಡುವುದು. ಟೆಂಡರ್‌ದಾರರು ವಿಧಾನಸೌಧ ಮತ್ತು ಬಹುಮಹಡಿ ಕಟ್ಟಡದ ಉಪಾಹಾರ ಮಂದಿರದ ಸ್ಥಳದ ಪರಿವೀಕ್ಷಣೆ ಮಾಡಬಹುದು.

33) ಕರ್ನಾಟಕ ಸರ್ಕಾರ ಸಚಿವಾಲಯ, ವಿಧಾನಸಭೆ ಸಚಿವಾಲಯ ಮತ್ತು ವಿಧಾನ ಪರಿಷತ್ತಿನ ಸಚಿವಾಲಯದ ಸಿಬ್ಬಂದಿಗೆ ಅವರು ಗುರುತಿನ ಚೀಟಿಯನ್ನು ತೋರಿಸಿದಲ್ಲಿ ಈ ಕೆಳಗಿನ ತಿಂಡಿ ತಿನಿಸು, ಕಾಫೀ, ಟೀ ಇತ್ಯಾದಿಗಳನ್ನು ಅವುಗಳ ಮುಂದೆ ನಿಗದಿಪಡಿಸಿರುವ ಪ್ರಮಾಣ ಮತ್ತು ದರದಲ್ಲಿ ಅವುಗಳನ್ನು ಒದಗಿಸತಕ್ಕದ್ದು.

| ಕ್ರ ಸಂ. | ಕಾಫೀ, ಟೀ, ತಿಂಡಿ ಇತ್ಯಾದಿಗಳ ಹೆಸರು | ಪ್ರಮಾಣ | ದರ ರೂ. |
|---|---|---|---|
| 01 | ಇಡ್ಲಿ | 75 gm. | 2/- ಒಂದಕ್ಕೆ |
| 02 | ವಡೆ | 100 gm | 4/- ಒಂದಕ್ಕೆ |
| 03 | ಉಪ್ಪಿಟ್ಟು | 100gm | 3.50 |
| 04 | ಖಾರಾಬಾತ್ | 100gm | 3.50 |
| 05 | ಚೌಚೌ ಬಾತ್ | 200gm | 7/- |
| 06 | ಪಕೋಡ | 100gm | 6/- |
| 07 | ರೈಸ್ ಬಾತ್ | 300gm | 5/- |
| 08 | ಅನ್ನ ಸಾಂಬಾರ್ | 325gm | 5/- |
| 09 | ಮಸಾಲಾ ದೋಸೆ | 250gm | 7/- |
| 10 | ಸೆಟ್ ದೋಸೆ | 250gm | 7/- |
| 11 | ಪೂರಿ | 250gm | 7/- |
| 12 | ಕಾಫಿ/ಟೀ | 100 ಔನ್ಸ್ | 3/- |
| 13 | ಬೋಂಡಾ | 100gm | 6/- |
| 14 | ಲಂಚ್ (ಅನ್ನ, ಸಾಂಬಾರ್, ರಸಮ್, ಮೊಸರು, ಪಲ್ಯ, ಚಪಾತಿ/ಪೂರಿ/ರಾಗಿ ಮುದ್ದೆ) | 500 gm | 14/- |

ಇತರ ಆಹಾರ ಪದಾರ್ಥಗಳಿಗೆ ಟೆಂಡರುದಾರರೇ ಸೂಕ್ತ ದರ ನಿಗದಿಪಡಿಸಿ ಮಾರಾಟ ಮಾಡಬಹುದಾಗಿದೆ.

34) ಉಪಾಹಾರ ಮಂದಿರ ಮತ್ತು ಅದರ ಆವರಣದಲ್ಲಿ ಇನ್ಯಾವುದೇ ವಾಣಿಜ್ಯ ಚಟುವಟಿಕೆಗಳನ್ನು ನಡೆಸುವಂತಿಲ್ಲ

35) ಈ ಉಪಾಹಾರ ಮಂದಿರವನ್ನು ಕಚೇರಿ ಕೆಲಸದ ದಿನಗಳಲ್ಲಿ ಬೆಳಿಗ್ಗೆ 9-00 ರಿಂದ ಸಂಜೆ 6-00 ಗಂಟೆವರೆಗೆ ಮಾತ್ರ ನಡೆಸತಕ್ಕದ್ದು ಮತ್ತು ಸಾರ್ವಜನಿಕ ರಜಾ ದಿನಗಳಲ್ಲಿ ಈ ಉಪಾಹಾರ ಮಂದಿರವನ್ನು ನಡೆಸುವಂತಿಲ್ಲ. ಈ ಉಪಾಹಾರ ಮಂದಿರದಲ್ಲಿ ನಿಗದಿತ ವೇಳೆಯ ನಂತರ ಉಪಾಹಾರ ಮಂದಿರದ ಯಾವುದೇ ಸಿಬ್ಬಂದಿ/ನೌಕರರು ಇರುವಂತಿಲ್ಲ. ಈ ಉಪಾಹಾರ ಮಂದಿರಗಳಿಗೆ ಸಾರ್ವಜನಿಕರ ಪ್ರವೇಶವು ಸರ್ಕಾರವು ಕಾಲಾನುಕಾಲದಲ್ಲಿ ನಿಗದಿಪಡಿಸುವ ನಿರ್ಬಂಧಕ್ಕೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ ರವಿಮೂರ್ತಿ**

ಪಿ.ಆರ್.276 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1).

**ಪೊಲೀಸ್ ಇಲಾಖೆ**

**ಪೊಲೀಸ್ ಕಮೀಷನರ್, ಬೆಂಗಳೂರು ನಗರ, ಬೆಂಗಳೂರು.**

**ಅಧಿಸೂಚನೆ ಸಂ: ಸಿಬ್ಬಂದಿ 01 (1) 17/2005 ದಿನಾಂಕ 05ನೇ ಮೇ 2005**

**ವಿಷಯ:** ಬೆಂಗಳೂರು ನಗರದಲ್ಲಿ ಖಾಲಿ ಇರುವ ಸಿವಿಲ್/ಮಹಿಳಾ/ಸಶಸ್ತ್ರ ಪೊಲೀಸ್ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ.

ಬೆಂಗಳೂರು ನಗರದಲ್ಲಿ ಈ ಕೆಳಗೆ ಕಾಣಿಸಿರುವಂತೆ ಖಾಲಿ ಇರುವ ಸಿವಿಲ್/ಮಹಿಳಾ/ಸಶಸ್ತ್ರ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್/13/ಎಸ್‌ಬಿಸಿ/2001 ದಿನಾಂಕ 21–11–2001 ಮತ್ತು 01–06–2002 ರನ್ವಯ ಭರ್ತಿ ಮಾಡಲು ನಿಗಧಿತ ನಮೂನೆಯಲ್ಲಿ ಅರ್ಜಿಗಳನ್ನು ಅರ್ಹ ಅಭ್ಯರ್ಥಿಗಳಿಂದ ಆಹ್ವಾನಿಸಲಾಗಿದೆ. ಅಭ್ಯರ್ಥಿಗಳು ಈ ಅಧಿಸೂಚನೆಯೊಡನೆ ಪ್ರಕಟಿಸಿರುವ ನಿಗಧಿತ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ 04–06–2005 ಸಾಯಂಕಾಲ 5.00 ಗಂಟೆಯೊಳಗೆ ಪೊಲೀಸ್ ಕಮೀಷನರ್ ಬೆಂಗಳೂರು ನಗರರವರ ಕಛೇರಿ, ಇನ್‌ಫ್ಯಾಂಟ್ರಿ ರಸ್ತೆ, ಬೆಂಗಳೂರು ಇಲ್ಲಿಗೆ ತಲುಪಿಸತಕ್ಕದ್ದು.

**ನಾಗರೀಕ ಪೊಲೀಸ್ ಪೇದೆ – 45 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ.**

| ಕ್ರ. ಸಂ. | ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|---|
| 1 | ಎಸ್.ಸಿ | 33 | 09 | 03 | 01 | 01 | 19 |
| 2 | ಎಸ್.ಟಿ | 12 | 03 | 01 | 01 | 01 | 06 |

**ಮಹಿಳಾ ಪೊಲೀಸ್ ಪೇದೆ – 01 ಖಾಲಿ ಹುದ್ದೆಯ ವರ್ಗೀಕರಣ ಈ ಕೆಳಗಿನಂತಿದೆ.**

| ಕ್ರ. ಸಂ. | ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|---|
| 1 | ಎಸ್.ಸಿ | – | – | – | – | – | – |
| 2 | ಎಸ್.ಟಿ | 01 | – | – | – | – | 01 |

**ಸಶಸ್ತ್ರ ಪೊಲೀಸ್ ಪೇದೆ – 12 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ.**

| ಕ್ರ. ಸಂ. | ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|---|
| 1 | ಎಸ್.ಸಿ | 10 | 02 | 01 | 01 | – | 06 |
| 2 | ಎಸ್.ಟಿ | 02 | 01 | – | 01 | – | – |

**ವಯೋಮಿತಿ, ವಿದ್ಯಾರ್ಹತೆ ಮತ್ತು ವೇತನ ಶ್ರೇಣಿ**

1 ಸಿವಿಲ್/ಸಶಸ್ತ್ರ ಪೊಲೀಸ್ ಹುದ್ದೆಗಳಿಗೆ ಪುರುಷ ಅಭ್ಯರ್ಥಿಗಳು ಹಾಗೂ ಮಹಿಳಾ ಪೊಲೀಸ್ ಪೇದೆ ಹುದ್ದೆಗೆ ಮಹಿಳೆಯರು ಮಾತ್ರ ಅರ್ಜಿ ಸಲ್ಲಿಸಬಹುದಾಗಿದೆ.

2 ವಯೋಮಿತಿ : ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 04–06–2005 ಕ್ಕೆ ಅಭ್ಯರ್ಥಿಗೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು ಮತ್ತು ಗರಿಷ್ಠ 40 ವರ್ಷ ಮೀರಿರಬಾರದು.

ವಿದ್ಯಾರ್ಹತೆ : ಸಿವಿಲ್ /ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಗೆ } ಪಿ.ಯು.ಸಿ/ಜೆ.ಓ.ಸಿ/ಜೆ.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕು

ಸಶಸ್ತ್ರ ಪೊಲೀಸ್ ಪೇದೆ ಹುದ್ದೆಗೆ } 10ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕು

**ನಾಗರೀಕ /ಮಹಿಳಾ ಪೊಲೀಸ್ ಪೇದೆಗಳಿಗೆ**

**ಟಿಪ್ಪಣಿ:** ( 1) ವೃತ್ತಿ ತರಬೇತಿ ಇಲಾಖೆಯು ನಡೆಸುವ ನಾಲ್ಕು (4) ಸೆಮಿಸ್ಟರ್‌ಗಳನ್ನೊಳಗೊಂಡ ಕೋರ್ಸ್‌ನಲ್ಲಿ ಅಭ್ಯರ್ಥಿಯು ತೇರ್ಗಡೆಯಾಗಿದ್ದಲ್ಲಿ ಅವರನ್ನು ಜೆ.ಓ.ಸಿ ಅಭ್ಯರ್ಥಿ ಎಂದು ಪರಿಗಣಿಸಲಾಗುವುದು. ಜೆ.ಓ.ಸಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ 2ನೇ ಮತ್ತು 4ನೇ ಸೆಮಿಸ್ಟರ್‌ನ ಆಯ್ಕೆ ವಿಷಯದ ಮತ್ತು 4ನೇ ಸೆಮಿಸ್ಟರ್‌ನ ಎರಡು ಭಾಷೆಗಳಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಶ್ರೇಣಿಯನ್ನು ಪರಿಗಣಿಸಿ ತೆಗೆದುಕೊಳ್ಳಲಾಗುವುದು. ಒಂದು ವೇಳೆ ಜೆ.ಓ.ಸಿ ಅಭ್ಯರ್ಥಿಗಳಿಗೆ ಎರಡು ಭಾಷೆಗಳಲ್ಲಿ ವಿನಾಯಿತಿ ನೀಡಲಾಗಿದ್ದಲ್ಲಿ ಎರಡನೇ ಮತ್ತು ನಾಲ್ಕನೇ ಸೆಮಿಸ್ಟರ್‌ಗಳ ಅಂಕಗಳ ಜೊತೆಗೆ ಪಿ.ಯು.ಸಿ ಪರೀಕ್ಷೆಯ ಎರಡು ಭಾಷೆಗಳ ಅಂಕಗಳನ್ನು ಪರಿಗಣಿಸಲಾಗುವುದು. ಒಂದು ವೇಳೆ ಜೆ.ಒ.ಸಿ ಅಭ್ಯರ್ಥಿಗಳು ಒಂದೇ ಭಾಷೆಯಲ್ಲಿ ವಿನಾಯಿತಿ ಪಡೆದಿದ್ದಲ್ಲಿ ,ಎರಡನೇ ಮತ್ತು ನಾಲ್ಕನೇ ಸೆಮಿಸ್ಟರ್‌ಗಳ ಆಯ್ಕೆ ವಿಷಯದಲ್ಲಿ ಪಡೆದ ಅಂಕಗಳ ಜೊತೆಗೆ ಯಾವ ಭಾಷೆಯಲ್ಲಿ ವಿನಾಯಿತಿ ಪಡೆಯಲಾಗಿದೆಯೋ ಆ ಭಾಷೆಯಲ್ಲಿ ಪಿ.ಯು.ಸಿ ಯಲ್ಲಿ ಪಡೆದ ಅಂಕ ಮತ್ತು ಯಾವ ಭಾಷೆಯಲ್ಲಿ ವಿನಾಯಿತಿ ದೊರಕಿಲ್ಲವೋ ಆ ಭಾಷೆಯಲ್ಲಿ ಜೆ.ಓ.ಸಿ ಯ ನಾಲ್ಕನೇ ಸೆಮಿಸ್ಟರ್‌ನಲ್ಲಿ ಪಡೆದ ಅಂಕಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದು.

(2) ವೃತ್ತಿ ತರಬೇತಿ ಇಲಾಖೆಯು ನಡೆಸುವ ಎರಡು ವರ್ಷದ ಕೋರ್ಸ್‌ನಲ್ಲಿ ಅಭ್ಯರ್ಥಿಯು ತೇರ್ಗಡೆ ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಯನ್ನು ಜೆ ಎಲ್ ಸಿ ಅಭ್ಯರ್ಥಿಯೆಂದು ಪರಿಗಣಿಸಲಾಗುವುದು. ಜೆ ಎಲ್ ಸಿ ಅಭ್ಯರ್ಥಿಯು ಎರಡು ವರ್ಷಗಳ ಕೋರ್ಸ್‌ನಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಶ್ರೇಣಿಯನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದು.

4. ವೇತನ ಶ್ರೇಣಿ : ರೂ.3000–75–3450–100–4450–125–5450

5. ಆಯ್ಕೆ ವಿಧಾನ :

1) ಅಭ್ಯರ್ಥಿಗಳಿಂದ ಸ್ವೀಕರಿಸಿರುವ ಅರ್ಜಿಗಳನ್ನು ಹುದ್ದೆಗೆ ನಿಗಧಿಪಡಿಸಿರುವ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳ ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ತಯಾರಿಸಲಾಗುವುದು. ಅರ್ಹತಾ ಪಟ್ಟಿಯನ್ನು ತಯಾರಿಸುವಾಗ ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ 21–11–01 ರನ್ವಯ ಕನಿಷ್ಟ 29 ವಯಸ್ಸಾಗಿರುವ ಹಾಗೂ ಗರಿಷ್ಠ 40 ವರ್ಷ ಮೀರಿರದ ಅಭ್ಯರ್ಥಿಗಳಿಗೆ ಪ್ರಥಮ ಆದ್ಯತೆ ನೀಡಲಾಗುವುದು. 29 ವರ್ಷದಿಂದ 40 ವರ್ಷದೊಳಗಿನ ಅರ್ಹ ಅಭ್ಯರ್ಥಿಯು ದೊರಕದಿದ್ದಲ್ಲಿ 18 ವರ್ಷದಿಂದ 29 ವರ್ಷ ವಯಸ್ಸಿನೊಳಗಿನ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದು.

2) ಅಭ್ಯರ್ಥಿಗಳು ಈ ಕೆಳಕಂಡಂತೆ ದೈಹಿಕ ಅರ್ಹತೆಯನ್ನು ಹೊಂದಿರಬೇಕು. ಆಯ್ಕೆಯಾದ ಅಭ್ಯರ್ಥಿಗಳನ್ನು ಈ ಕೆಳಕಂಡ ವೈದ್ಯಕೀಯ ಪರೀಕ್ಷೆಗೆ ಒಳಪಡಿಸಲಾಗುವುದು. ಅರ್ಹತೆಯಿದ್ದಲ್ಲಿ ಮಾತ್ರ ಪರಿಗಣಿಸಲಾಗುವುದು.

6. ದೈಹಿಕ ಅರ್ಹತೆ ( ನಾಗರೀಕ ಮತ್ತು ಸಶಸ್ತ್ರ ಪೊಲೀಸ್ ಪೇದೆಗಳಿಗೆ)
   1. ಎತ್ತರ 168 ಸೆಂ.ಮೀ
   2. ಎದೆಯ ಸುತ್ತಳತೆ 5 ಸೆಂ.ಮೀ ವಿಸ್ತಾರಗೊಂಡರೆ 86 ಸೆಂ.ಮೀ ಗಳಿಗೆ ಕಡಿಮೆ ಇಲ್ಲದಂತೆ ಎದೆ ಸುತ್ತಳತೆ ಹೊಂದಿರಬೇಕು.

ಮಹಿಳಾ ಪೊಲೀಸ್ ಪೇದೆ ಹುದ್ದೆಗೆ :
   1. ಎತ್ತರ : 157 ಸೆಂ.ಮಿ
   2. ತೂಕ : 49 ಕೆ.ಜಿ
   3. ದೃಷ್ಠಿ

| | ಉತ್ತಮ | | ಕನಿಷ್ಠ |
|---|---|---|---|
| 1. ದೂರದೃಷ್ಠಿ | 6/9 | ಅಥವಾ | 6/9 |
| | 6/9 | ಅಥವಾ | 6/12 |
| 2. ಸಮೀಪ ದೃಷ್ಠಿ | 0/6 | ಅಥವಾ | 0/8 |

ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು ವರ್ಣಾಂಧತೆ, ಮೆಳ್ಳಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.

   4. ಶ್ರವಣ ಶಕ್ತಿ : 1 ರಿನ್ನೆಸ್ ಪರೀಕ್ಷೆ 2 ವೆಬ್ಬರ್ ಪರೀಕ್ಷೆ 3 ವರ್ಟಿಗೋ ಪರೀಕ್ಷೆ ಮೇಲಿನ ಪರೀಕ್ಷೆಗಳಲ್ಲಿ ಯಾವುದೇ ನ್ಯೂನತೆಗಳು ಕಂಡು ಬಂದಲ್ಲಿ ಅನರ್ಹತೆ ಎಂದು ಪರಿಗಣಿಸಲಾಗುವುದು.

**ಕೆಳಕಂಡವುಗಳು ದೈಹಿಕ ಅನರ್ಹತೆಗೊಳಗಾಗಿರುತ್ತವೆ.**

1. ತಾಗು ಮಂಡಿ 2. ಬಾಗಿದ ಕಾಲುಗಳು 3. ಚಪ್ಪಟೆ ಪಾದ 4. ಅಪಧಮನಿ ಊತ

**6. ತರಬೇತಿ ಮತ್ತು ಖಾಯಂ ಪೂರ್ವ ಅವಧಿ**

**ತರಬೇತಿ:–** ನೇಮಕಗೊಂಡ ಅಭ್ಯರ್ಥಿಗಳು ಪೊಲೀಸ್ ತರಬೇತಿ ಶಾಲೆಯಲ್ಲಿ ಒಂಬತ್ತು (9) ತಿಂಗಳುಗಳ ಕಾಲ ಮೂಲ ತರಬೇತಿಯನ್ನು ಪಡೆಯಬೇಕು ಹಾಗೂ ತರಬೇತಿಯಲ್ಲಿ ನಿಗದಿಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು. ತರಬೇತಿ ಶಾಲೆಗಳಲ್ಲಿ ತರಬೇತಿ ಮುಗಿಸಿದ ನಂತರ ಪೊಲೀಸ್ ಠಾಣೆಗಳಲ್ಲಿ ಆರು (6) ತಿಂಗಳು ಪ್ರಾಯೋಗಿಕ ತರಬೇತಿಗೆ ನಿಯೋಜಿಸಲಾಗುವುದು.

ಖಾಯಂ ಪೂರ್ವ ಅವಧಿ : ತರಬೇತಿ ಅವಧಿಯೂ ಸೇರಿದಂತೆ ಎರಡು ವರ್ಷ ಆರು ತಿಂಗಳುಗಳಾಗಿರುವುದು.

7. **ಲಗತ್ತುಗಳು:–**

1. ಅರ್ಹತಾ (qualifying) ಪರೀಕ್ಷೆಯ ಅಂಕಪಟ್ಟಿಯ ನಕಲು.
2. ಜನ್ಮ ದಿನಾಂಕದ ಪ್ರಮಾಣ ಪತ್ರ/ಎಸ್.ಎಸ್.ಎಲ್.ಸಿ ಅಂಕಪಟ್ಟಿ/ವರ್ಗಾವಣೆ ಪ್ರಮಾಣ ಪತ್ರದ ನಕಲು
3. ಪರಿಶಿಷ್ಠ ಜಾತಿ/ಪಂಗಡಕ್ಕೆ ಸಂಬಂಧಪಟ್ಟಂತೆ ತಹಶೀಲ್ದಾರ್ ರವರಿಂದ ವಿತರಿಸಿದ ನಮೂನೆ–ಡಿ ರಲ್ಲಿ ಜಾತಿ ಪ್ರಮಾಣ ಪತ್ರದ ನಕಲನ್ನು ಸಲ್ಲಿಸುವುದು.
4. ಮಾಜಿ ಸೈನಿಕ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಸಂಬಂಧಪಟ್ಟ ಘಟಕದಿಂದ ನೀಡಿರುವ ಡಿಸ್‌ಚಾರ್ಜ್ ಪ್ರಮಾಣ ಪತ್ರದ ನಕಲು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ/08/ಸೆನೆನಿ/2001 ದಿನಾಂಕ 13–02–2001 ರ ಪ್ರಕಾರ 1ನೇ ತರಗತಿಯಿಂದ 10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿಧ್ಯಾಬ್ಯಾಸ ಹೊಂದಿರುವವರು ನಮೂನೆ–2 ರಲ್ಲಿ ನಿಗದಿಪಡಿಸಿದ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಶಾಲಾ ಮುಖ್ಯೋಪಾದ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರದ ನಕಲು.
6. ಯೋಜನಾ ನಿರಾಶ್ರಿತ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್/23/ಎಸ್ಆರ್‌ಆರ್/99 ದಿನಾಂಕ 23–11–2000 ರನ್ವಯ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/44/ಸೆನೆನಿ/2001 ದಿನಾಂಕ 27–07–2001 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಸಂಬಂಧಪಟ್ಟ ತಹಶೀಲ್ದಾರರವರಿಂದ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದು ಸಲ್ಲಿಸತಕ್ಕದ್ದು.
7. ಕನ್ನಡ ಮಾಧ್ಯಮ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರದ ನಕಲನ್ನು ಸಲ್ಲಿಸಬೇಕು.
8. ರೂ. 5/– ಮೌಲ್ಯದ ಸ್ಟ್ಯಾಂಪ್ ಹಚ್ಚಿದ ಒಂದು ಲಕೋಟೆ 9 x 4 (envelope) ನಲ್ಲಿ ನಿಮ್ಮ ಸರಿಯಾದ ಅಂಚೆಯ ವಿಳಾಸವನ್ನು ಬರೆದು ಅರ್ಜಿಯೊಂದಿಗೆ ಲಗತ್ತಿಸುವುದು.
9. ಅರ್ಜಿಯಲ್ಲಿ ಫೋಟೋ ಅಂಟಿಸಲು ನಿಗದಿಪಡಿಸಿರುವ ಸ್ಥಳದಲ್ಲಿ ನಿಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವ ಚಿತ್ರವನ್ನು ಅಂಟಿಸಿ ಅದರ ಮೇಲೆ ಪೂರ್ಣ ಸಹಿ ಮಾಡುವುದು.

10. ಅರ್ಜಿಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದ ನಂತರದಲ್ಲಿ ಸಲ್ಲಿಸುವ ಲಗತ್ತುಗಳನ್ನು ಸ್ವೀಕರಿಸಲಾಗುವುದಿಲ್ಲ ಹಾಗೂ ಅವುಗಳನ್ನು ತಿರಸ್ಕರಿಸಲಾಗುವುದು.

ಈ ಮೇಲೆ ಹೇಳಿದ ಎಲ್ಲಾ ದಾಖಲೆಗಳ ದೃಢೀಕೃತ ಜೆರಾಕ್ಸ್ ಪ್ರತಿ ನೀಡಬೇಕು.

**ಸೂಚನೆ:-**

1 ಅರ್ಜಿಯಲ್ಲಿ ಭರ್ತಿ ಮಾಡಿರುವ ಮಾಹಿತಿ ಮತ್ತು ಅದರೊಂದಿಗೆ ಲಗತ್ತಿಸಿರುವ ಪ್ರಮಾಣ ಪತ್ರಗಳು ಸುಳ್ಳು ಮಾಹಿತಿ ನೀಡಿದ್ದಾಗಿ, ನೇಮಕಾತಿಯ ಯಾವುದೇ ಹಂತದಲ್ಲಿ ಕಂಡು ಬಂದಲ್ಲಿ ಅಂತಹ ಅರ್ಜಿಗಳನ್ನು ಪತ್ರ ವ್ಯವಹಾರವಿಲ್ಲದೆ ತಿರಸ್ಕರಿಸಲಾಗುವುದು.

2. ಅಭ್ಯರ್ಥಿಯು ಯಾವುದೇ ಅಪರಾಧ ಮೊಕದ್ದಮೆಯಲ್ಲಿ ಬಂಧನಕ್ಕೆ ಒಳಪಟ್ಟಿರಬಾರದು. ಅಲ್ಲದೆ ಅಪರಾಧ ಮೊಕದ್ದಮೆಯು ತನಿಖೆಗೆ ಒಳಗಾಗಿರಬಾರದು. ಅಪರಾಧ ಪ್ರಕರಣಗಳಲ್ಲಿ ದೋಷಿಯಾಗಿರಬಾರದು ಒಂದು ವೇಳೆ ಇಂತಹ ಪ್ರಕರಣಗಳಿಗೆ ಒಳಗಾಗಿದ್ದಲ್ಲಿ ಅಂತಹ ಅಭ್ಯರ್ಥಿಯು ನೇಮಕಾತಿಗೆ ಅನರ್ಹರಾಗುತ್ತಾರೆ.

3. ಅಪೂರ್ಣ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

4. ಸುಳ್ಳು ಮಾಹಿತಿ ಅಥವಾ ನಕಲಿ ಪ್ರಮಾಣ ಪತ್ರ/ ದಾಖಲಾತಿಗಳನ್ನು ಸಲ್ಲಿಸಿ ನೌಕರಿ ಪಡೆದಿರುವುದು ಯಾವುದೇ ಸಂದರ್ಭದಲ್ಲಿ ಕಂಡು ಬಂದಲ್ಲಿ ಅವರನ್ನು ಯಾವುದೇ ಮುನ್ಸೂಚನೆ ನೀಡದೆ ನೌಕರಿಯಿಂದ ವಜಾ ಮಾಡುವುದರ ಜೊತೆಗೆ ಅವರ ವಿರುದ್ದ ಕಾನೂನು ರೀತ್ಯ ಕ್ರಮ ತೆಗೆದುಕೊಳ್ಳಲಾಗುವುದು.

5. ಬೆಂಗಳೂರು ನಗರ ಪೊಲೀಸ್ ಕಮೀಷನರ್ ಕಛೇರಿಯ ಪ್ರಕಟಣಾ ಫಲಕದಲ್ಲಿ ಪ್ರಕಟಿಸಿರುವ ಅರ್ಜಿಯ ನಮೂನೆಯಂತೆ ಅರ್ಜಿಯನ್ನು ಸಿದ್ದಪಡಿಸಿ ಸಲ್ಲಿಸಬೇಕಾಗಿರುತ್ತದೆ. ಕಛೇರಿ ವತಿಯಿಂದ ಅರ್ಜಿ ನಮೂನೆಗಳನ್ನು ನೀಡಲಾಗುವುದಿಲ್ಲ.

6. ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ನೋಂದಾಯಿತ ಅಂಚೆ /ಕೊರಿಯರ್ ಮುಖಾಂತರ ಅಥವಾ ಸ್ವತ: ಪೊಲೀಸ್ ಕಮೀಷನರ್ ಬೆಂಗಳೂರು ನಗರ ರವರ ಕಛೇರಿಗೆ ನಿಗಧಿತ ದಿನಾಂಕ ಮತ್ತು ಸಮಯದೊಳಗೆ ತಲುಪಿಸಬೇಕು. ತಡವಾಗಿ ಬಂದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಭರ್ತಿ ಮಾಡಿದ ಅರ್ಜಿಯನ್ನು ಸಲ್ಲಿಸುವ ಲಕೋಟೆಯ ಮೇಲೆ ಸಿವಿಲ್/ಮಹಿಳಾ/ಸಶಸ್ತ್ರ ಪೊಲೀಸ್ ಪೇದೆ (ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡ) ಹುದ್ದೆಗೆ ಅರ್ಜಿ ಎಂದು ಸ್ಪಷ್ಟವಾಗಿ ನಮೂದಿಸಬೇಕು. ಅರ್ಜಿ ಸ್ವೀಕರಿಸಿದ್ದಕ್ಕೆ ಸಂಬಂದಪಟ್ಟವರಿಂದ ದಿನಾಂಕ ಮತ್ತು ಸಹಿ ಪಡೆದುಕೊಳ್ಳಬಹುದಾಗಿದೆ.

ಪೊಲೀಸ್ ಕಮೀಷನರ್
ಬೆಂಗಳೂರು ನಗರ.

**ಕರ್ನಾಟಕ ರಾಜ್ಯ ಪೊಲೀಸ್**
**ಬೆಂಗಳೂರು ನಗರ ಸಿವಿಲ್/ಮಹಿಳಾ/ಸಶಸ್ತ್ರ ಪೊಲೀಸ್ ಪೇದೆಗಳ**
**ಬ್ಯಾಕ್‌ಲಾಗ್ ಹುದ್ದೆಗಳಿಗೆ ಅರ್ಜಿ**

ಅರ್ಜಿ ಸಂಖ್ಯೆ.

| |
|---|
| ನಿಮ್ಮ ಇತ್ತೀಚಿನ ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಿ ಅದರ ಮೇಲೆ ಸಹಿ ಮಾಡುವುದು |

ಇವರಿಗೆ,
ಪೊಲೀಸ್ ಆಯುಕ್ತರು,
ಬೆಂಗಳೂರು ನಗರ.

1. ಅಭ್ಯರ್ಥಿಯ ಪೂರ್ಣ ಹೆಸರು ...........................................................
2. ತಂದೆ ಹೆಸರು ..........................................................
3. ಅಭ್ಯರ್ಥಿಯ ಅಂಚೆ ವಿಳಾಸ ..........................................................
...........................................................
.....................ಪಿನ್ ಕೋಡ್..................

1. ವರ್ಗ

(ಸರಿಯಾದ ಚೌಕದಲ್ಲಿ ( √ )ಗುರುತು ಹಾಕಿ)

| SC | ST |
|---|---|
| | |

2. ಗುಂಪು ಸರಿಯಾದುದಕ್ಕೆ ಗುರುತು ಹಾಕಿ

| ಗ್ರಾಮೀಣ | ಯೋಜನೆ ನಿರಾಶ್ರಿತ | ಮಾಜಿ ಸೈನಿಕ | ಕನ್ನಡ ಮಾದ್ಯಮ | ಇತರೆ |
|---|---|---|---|---|
| | | | | |

6. ವಿದ್ಯಾರ್ಹತೆ: (ಅ) ನಾಗರಿಕ/ಮಹಿಳಾ ಪೊಲೀಸ್ ಪೇದೆ ಹುದ್ದೆಗೆ ಮಾತ್ರ

| ಪಿಯುಸಿ | ಜೆಓಸಿ/ ಜೆಎಲ್‌ಸಿ | ಇತರೆ | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು |
|---|---|---|---|---|
| | | | | |

(ಆ) ಸಶಸ್ತ್ರ ಪೊಲೀಸ್ ಪೇದೆ ಹುದ್ದೆಗೆ ಮಾತ್ರ

| ಎಸ್‌ಎಸ್‌ಎಲ್ ಸಿ | 10ನೇ ತರಗತಿ | ಇತರೆ | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು |
|---|---|---|---|---|
| | | | | |

7. ಹುಟ್ಟಿದ ದಿನಾಂಕ:

| | | |
|---|---|---|
| | | |

8. ಲಗತ್ತುಗಳು:

1) ಎಸ್ ಎಸ್ ಎಲ್ ಸಿ ಅಥವಾ ತತ್ಸಮಾನ ಪರೀಕ್ಷೆಯ ಅಂಕಪಟ್ಟಿಯ ದೃಢೀಕೃತ ಪ್ರತಿ.
2) ಪಿಯುಸಿ ಅಥವಾ ತತ್ಸಮಾನ ಪರೀಕ್ಷೆಯ ಅಂಕಪಟ್ಟಿಯ ದೃಢೀಕೃತ ಪ್ರತಿ.
3) ಪರಿಶಿಷ್ಟ ಜಾತಿ/ವರ್ಗ ಪ್ರಮಾಣ ಪತ್ರದ ದೃಢೀಕೃತ ಪ್ರತಿ
4) ಕನ್ನಡ ಮಾಧ್ಯಮ, ಮಾಜಿ ಸೈನಿಕ, ಗ್ರಾಮೀಣ ಯೋಜನೆ ನಿರಾಶ್ರಿತ ಅಭ್ಯರ್ಥಿ ಪ್ರಮಾಣ ಪತ್ರದ ದೃಢೀಕೃತ ಪ್ರತಿ
5) ಒಂದು ಲಕೋಟೆ 9" x 4"(Envelope) ಯಲ್ಲಿ ನಿಮ್ಮ ಸರಿಯಾದ ಅಂಚೆಯ ವಿಳಾಸವನ್ನು ಬರೆದು ರೂ.5/–ಗಳ ಸ್ಟಾಂಪ್‌ನ್ನು ಅಂಟಿಸಿ ಅರ್ಜಿಯೊಂದಿಗೆ ಕಳಿಸಬೇಕು.

**ಘೋಷಣೆ**

ಮೇಲೆ ಹೇಳಿದ ವಿವರಗಳು ನನಗೆ ತಿಳಿದಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ನಿಜವೆಂದು ನಾನು ಈ ಮೂಲಕ ಘೋಷಿಸುತ್ತೇನೆ. ಯಾವುದೇ ಮಾಹಿತಿಯು, ನೇಮಕಾತಿ ಮುಂಚೆ ಅಥವಾ ತರುವಾಯ ಸುಳ್ಳು ಅಥವಾ ತಪ್ಪೆಂದು ಕಂಡು ಬಂದ ಸಂದರ್ಭದಲ್ಲಿ ಅಥವಾ ಅನರ್ಹತೆ ಪತ್ತೆ ಆದ ಸಂದರ್ಭದಲ್ಲಿ ನೇಮಕಾತಿ ಸಮಿತಿಯು ನನ್ನ ವಿರುದ್ಧ ಕ್ರಮ ಕೈಗೊಳ್ಳಬಹುದಾಗಿದೆ ಎಂದು ನನಗೆ ತಿಳಿದಿರುತ್ತದೆ.

ನಾನು ಅಧಿಸೂಚನೆಯ ನಿಯಮಗಳನ್ನು ಜಾಗರೂಕತೆಯಿಂದ ಓದಿರುತ್ತೇನೆ ಮತ್ತು ಅವುಗಳಿಗೆ ಬದ್ಧನಾಗಿರುತ್ತೇನೆ. ನಾನು ಅರ್ಜಿ ಸಲ್ಲಿಸಿದ ಹುದ್ದೆಯ ನೇಮಕಾತಿಗೆ ನಿಗದಿಪಡಿಸಿದ ವಯೋಮಿತಿ ವಿದ್ಯಾರ್ಹತೆ ಮುಂತಾದ ಅರ್ಹತೆಯ ಎಲ್ಲಾ ಷರತ್ತುಗಳನ್ನು ಪೂರೈಸುವುದಾಗಿಯೂ ಮತ್ತು ಇದೇ ಬಗೆಯ ಯಾವುದೇ ಪರೀಕ್ಷೆಗೆ ಹಾಜರಾಗದಂತೆ ನಾನು ಪರೀಕ್ಷೆಯಿಂದ ಉಚ್ಚಾಟಿಸಲ್ಪಟ್ಟಿಲ್ಲವೆಂದು ಸಹ ಘೋಷಿಸುತ್ತೇನೆ.

ಸ್ಥಳ : ಅಭ್ಯರ್ಥಿಯ ಪೂರ್ಣ ಸಹಿ

ದಿನಾಂಕ:

ಪಿ.ಆರ್. 277 ಪರಿಶೀಲಿಸಿದ ಅಧಿಕಾರಿಯ ಸಹಿ ಮತ್ತು ಹೆಸರು

## ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು 560009

**ಟೆಂಡರ್ ಪ್ರಕಟಣೆ ಸಂಖ್ಯೆ: ಆವೈಮ: 23: ಸರಬ: 2005 ದಿನಾಂಕ: 26ನೇ ಏಪ್ರಿಲ್ 2005**

2005ನೇ ಸಾಲಿಗೆ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿನ ಗ್ರಂಥಾಲಯಕ್ಕೆ ಅವಶ್ಯವಿರುವ ಪುಸ್ತಕಗಳನ್ನು ಸರಬರಾಜು ಮಾಡಲು, ಅಧಿಕೃತ ಪ್ರಕಟಕರಿಂದ/ ಪಬ್ಲಿಶರ್ಸ್‌ರಿಂದ/ ಮಾರಾಟಗಾರರಿಂದ ಮೊಹರು ಮಾಡಿದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ದಿನಾಂಕ: 09.06.2005 ರಂದು ಬೆಳಿಗ್ಗೆ 11.00 ಘಂಟೆಯೊಳಗಾಗಿ ಪ್ರಾಚಾರ್ಯರು ಹಾಗೂ ಟೆಂಡರು ಸಮಿತಿ ಅಧ್ಯಕ್ಷರು ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ರವರ ಕಛೇರಿಯಲ್ಲಿ ಸ್ವೀಕರಿಸಿ ದಿನಾಂಕ: 09.06.2005 ರಂದು 2.30 ಘಂಟೆಗೆ ಟೆಂಡರುಗಳನ್ನು ತೆರೆಯಲಾಗುವುದೆಂದು ಈ ಮೂಲಕ ಸಾರ್ವಜನಿಕರ ಹಾಗೂ ಇತರೆ ಸಂಸ್ಥೆಯವರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಟೆಂಡರು ಫಾರಂ ಬೆಲೆ ರೂ.1000/- ಗಳು (ಒಂದು ಸಾವಿರ ರೂ.ಗಳು ಮಾತ್ರ) + ಶೇ. 8 ರ ವ್ಯಾಟ್ ತೆರಿಗೆ ಪ್ರತ್ಯೇಕ. ಈ ಮೊತ್ತವನ್ನು ಹಿಂದಿರುಗಿಸಲಾಗುವುದಿಲ್ಲ.

ಪ್ರಾಚಾರ್ಯರು
ಟೆಂಡರು ಸಮಿತಿ ಅಧ್ಯಕ್ಷರು
ಸರ್ಕಾರಿ ಆಯುರ್ವೇದ ವೈದ್ಯಮಹಾವಿದ್ಯಾಲಯ, ಬೆಂಗಳೂರು-560009.

ಪಿ.ಆರ್.272

## ಕಾರ್ಯನಿರ್ವಾಹಕ ಅಭಿಯಂತರು, ಲೋಕೋಪಯೋಗಿ ವಿಭಾಗ ವಿಜಾಪೂರ

**ನಮೂನೆ-1**

**(ನಿಯಮ)**

**ಪ್ರಕಟಣೆ:**

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರು ಲೋಕೋಪಯೋಗಿ ಉಪವಿಭಾಗ ಮುದ್ದೆಬಿಹಾಳದಲ್ಲಿ ಅಕ್ಷರಸ್ಥ ಸಹಾಯಕ ಎಂದು ಕೆಲಸ ನಿರ್ವಹಿಸುತ್ತಿರುವ **ಶ್ರೀ ಗೌಡಪ್ಪ ಶಿವನಪ್ಪ ವಡವಡಗಿ** ಇವರಿಗೆ **ಶ್ರೀ ಗೌಡಪ್ಪ ಶಿನವಪ್ಪ ಕಂಠಿ** ಎಂದು ಹೆಸರು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಕಾರ್ಯನಿರ್ವಾಹಕ ಅಭಿಯಂತರರು,
ಲೋಕೋಪಯೋಗಿ ವಿಭಾಗ, ವಿಜಾಪುರ.

ಪಿ.ಡಿ.54

**FORM IV**
**(See Rule 12)**
**NOTICE**

It is hereby notified that the undersigned has changed his/her name from **MALLAPPA SHIVALING BHANGI** to **MALLAPPA SHIVALING DESAI**

PD-60 **MALLAPPA SHIVALING DESAI**

**KARNATAKA STATE BOARD OF WAKFS**
**"DARUL AWKAF" No. 6, Cunningham Road, Bangalore-52.**
**CERTIFICATE OF REGISTRATION**
**No. KTW/REG/49/BJR/2000-01 Dated: 17th May 2005**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act. 1995.

| Sl.No. of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| | Masjid-e-Raheem, Makhbera & well of Mahalbagayath, Bijapur. | 1. Sy. No.669/1,-Masjid-e-Raheem,<br>Measuring: 2A-08G.<br>out of which an area of<br>North-South : 150'<br>East-West : 100"<br>belongs to Masjid.<br>**BOUNDARIES**<br>**North:** Remaining land of Sy.No. 669/1.<br>**South :** -do-<br>**East :** -do-<br>**West:** Other's land.<br>2. Sy.No.669/1, - Makhbera & Well. Measuring:2A-08G.<br>Out of which an area of<br>North-South: 100'<br>East-West : 60'<br>is wakf property.<br>**BOUNDARIES.**<br>**North :** Road.<br>**South :** Remaining land in Sy.No.669/1<br>**East :** Well & Remaining land in Sy.No.669/1.<br>**West :** Remaining land in Sy.No.669/1. | Masjid-e-Raheem, Mahbera & Well of Mahalbagyath Bijapur, managed by its chairman |

Chief Executive Officer,
PD-66 Karnataka State Board of Wakfs.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಪ್ರಾದೇಶಿಕ ಅರಣ್ಯ ವಿಭಾಗ, ತುಮಕೂರು**

**ಅರಣ್ಯ ಕಾಮಗಾರಿಗಳ ಟೆಂಡರ್**

**ಸಂಖ್ಯೆ: ಎಅಕಾ/ಟೆಂಡರ್/ವಿವ-7/2005-06 ದಿನಾಂಕ: 19ನೇ ಮೇ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2005-06ನೇ ಸಾಲಿನಲ್ಲಿ ತುಮಕೂರು ಪ್ರಾದೇಶಿಕ ಅರಣ್ಯ ವಿಭಾಗದ ವ್ಯಾಪ್ತಿಗೆ ಒಳಪಡುವ ವಲಯಗಳಲ್ಲಿನ ಅನುಬಂಧದಲ್ಲಿ ತೋರಿಸಿರುವ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2005-06ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಪ್ರತಿಯೊಂದು ಕಾಮಗಾರಿಗೆ ಪ್ರತ್ಯೇಕ ವಲಯವಾರು ಮೊಹರಾದ ಪ್ರತಿ ಕಾಮಗಾರಿಗೆ ಶೇಕಡವಾರು ಟೆಂಡರ್ ಕರೆಯಲಾಗಿದೆ.

ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 27.06.2005 ರಂದು 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು. ದಿನಾಂಕ: 27.06.2005 ರಂದು ಯಾವ ಕಾಮಗಾರಿಗೂ ಟೆಂಡರುಗಳು ಬಾರದಿದ್ದಲ್ಲಿ ಮತ್ತೆ ಎರಡನೇ ಬಾರಿಗೆ ದಿನಾಂಕ: 30.6.2005 ರಂದು 3.00 ಗಂಟೆಗೆ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದು. ಎರಡನೇ ಬಾರಿಗೂ ಟೆಂಡರುಗಳು ಬಾರದಿದ್ದಲ್ಲಿ ಮೂರನೇ ಬಾರಿಗೆ 4.07.2005 ರಂದು 3.00 ಗಂಟೆಗೆ ವಿಭಾಗ ಕಛೇರಿಯಲ್ಲಿ ಟೆಂಡರುಗಳನ್ನು ಸ್ವೀಕರಿಸಲಾಗುವುದು ಮತ್ತೆ ಪ್ರತ್ಯೇಕವಾಗಿ ಪ್ರಕಟಣೆ ನೀಡಲಾಗುವುದಿಲ್ಲ.

## ಷೆಡ್ಯೂಲ್

| ಕ್ರ. ಸಂ | ಟೆಂಡರ್ ಹೊರಡಿಸಿದ ಪ್ರಾಧಿಕಾರ | ಟೆಂಡರ್ ಕ್ರಮಾಂಕ ಹಾಗೂ ದಿನಾಂಕ | ವಲಯ | ಯೋಜನೆ | ಕಾಮಗಾರಿ ವಿವರ | ಸ್ಥಳ | ಭೌತಿಕ ಪರಿಮಾಣ (ಹೆ./ಕಿಮೀ. ಗಳಲ್ಲಿ) | ಅಂದಾಜು ಮೊತ್ತ | ನಿಗದಿ ಪಡಿಸಿದ ಇಎಂಡಿ ಮೊತ್ತ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಉಪ ಅರಣ್ಯ ಸಂರಕ್ಷಣಾಧಿಕಾರಿ ಪ್ರಾದೇಶಿಕ ವಿಭಾಗ ತುಮಕೂರು | ಎ.ಅಕಾ. ಟೆಂಡರ್ ವಿವ. 7/2005-06 ದಿನಾಂಕ 19.05.05 | ಕುಣಿಗಲ್ ತುಮಕೂರು ಬುಕ್ಕಾಪಟ್ಟಣ | KSM and Biodeversity Conservation Project | 2005ನೇ ಮಳೆಗಾಲದಲ್ಲಿ ಜಾನುವಾರು ನಿರೋಧಕ ಕಂದಕಗಳನ್ನು ತೆಗೆಯುವುದು (ಮುಂಗಾರು ಕಾಮಗಾರಿಗಳು) | 1) ಹುಲಿಯೂರುದುರ್ಗ ಮೀಸಲು ಅರಣ್ಯ | 100 | 317700 | 8000 |
| | | | | | | 2) ದೇವರಾಯನದುರ್ಗ ಮೀಸಲು ಅರಣ್ಯ | 86 | 273200 | 6800 |
| | | | | | | 3) ಬುಕ್ಕಾಪಟ್ಟಣ ಮೀಸಲು ಅರಣ್ಯ | 100 | 317700 | 8000 |
| | | | | | | | - | - | - |
| | | | | | | | - | - | - |
| | | | | | | | ಒಟ್ಟು | 908600 | 22800 |

## ನಿಬಂಧನೆಗಳು:

1.a) ಟೆಂಡರ್ ಫಾರಂನ್ನು ಟೆಂಡರ್ ದಿನಾಂಕದಂದು ಅಪರಾಹ್ನ 1.00 ಗಂಟೆಯವರೆಗೆ ರೂ. 200-00 ಮತ್ತು ತೆರಿಗೆ ಪಾವತಿ ಮಾಡಿ ಪಡೆಯಬಹುದಾಗಿದೆ. ಭರ್ತಿ ಮಾಡಿದ ಟೆಂಡರ್ ಫಾರಂನ್ನು ಸಂಬಂಧಪಟ್ಟ ವಲಯಕ್ಕೊಂದು ನಮೂದಿಸಿ ಈ ಕಛೇರಿಯಲ್ಲಿ ಇಟ್ಟಿರುವ ಮೊಹರಾದ ಪೆಟ್ಟಿಗೆಯಲ್ಲಿ ಮಧ್ಯಾಹ್ನ 3.00 ಗಂಟೆಯವರೆಗೆ ಹಾಕಬಹುದಾಗಿದೆ.

b) ಟೆಂಡರ್ ಫಾರಂನ್ನು ವಲಯ, ವರ್ಷ ಮತ್ತು ಯೋಜನೆ ಅಥವಾ ಯೋಜನೇತರವಾರು ಪ್ರತ್ಯೇಕವಾಗಿ ಉಪಯೋಗಿಸುವುದು.

2. ಭರ್ತಿ ಮಾಡಿದ ಟೆಂಡರುಗಳನ್ನು ವಲಯವಾರು ಮತ್ತು ಕೆಲಸವಾರು ಸಲ್ಲಿಸಬೇಕು ಹಾಗೂ ದರವನ್ನು ನಮೂದಿಸುವಾಗ ಹಾಸನ ವೃತ್ತದ/ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ರವರ 2005-06ನೇ ಸಾಲಿಗೆ ಮಂಜೂರಾದ ಎಸ್.ಎಸ್.ಆರ್. ದರಕ್ಕೆ ಶೇಕಡವಾರು ಇಂತಿಷ್ಟು ಹೆಚ್ಚು, ಸಮ ಅಥವಾ ಕಡಿಮೆ ಎಂದು ನಮೂದಿಸಬೇಕು.

3. ಸ್ವೀಕರಿಸಲಾದ ಟೆಂಡರುಗಳನ್ನು ಆಯಾ ದಿನಾಂಕಗಳಂದು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಅಪರಾಹ್ನ 4.00 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

4. ಕೆಲಸಗಳು ಕಾಲಬದ್ಧವಾಗಿದ್ದು ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತುಪಡಿಸಿದವುಗಳಾಗಿರುತ್ತವೆ.

5. ಪ್ರತಿ ಟೆಂಡರ್‌ದಾರರು ಕಾಮಗಾರಿಗಳನ್ನು ನಿರ್ವಹಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳನ್ನು ಸ್ವಂತವಾಗಿ ಮಾಡಿಕೊಳ್ಳಬೇಕು.

6. ಸದರಿ ಕಾಮಗಾರಿಗಳಲ್ಲಿ ನೆಡುತೋಪುಗಳಿಗೆ ರಾಸಾಯನಿಕ ಗೊಬ್ಬರಗಳನ್ನು ಹಾಗೂ ತಂತಿ ಬೇಲಿಗೆ ಬಳಸಲು ತಂತಿಯನ್ನು ಇಲಾಖೆಯಿಂದ ಖರೀದಿಸಿ ಒದಗಿಸಲಾಗುವುದು.

7. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಚಿಸುವವರು ಆಯಾ ಕೆಲಸಕ್ಕೆ ನಿಗದಿಪಡಿಸಿದ ಇಎಂಡಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರ ಹೆಸರಿಗೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಪಾವತಿಸಬೇಕು.

8. ಗುತ್ತಿಗೆದಾರರು ಸಲ್ಲಿಸುವ ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

9. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರು ಕಾಯ್ದಿರಿಸಿಕೊಂಡಿದ್ದಾರೆ.

10. ಅರಣ್ಯ ಕಾಮಗಾರಿಗಳು ಋತುಮಾನಕ್ಕೆ ಅನುಗುಣವಾಗಿ ಕೆಲಸ ನಿರ್ವಹಿಸಬೇಕು. ಹಾಗೂ ತುಮಕೂರು ಅರಣ್ಯ ಜಿಲ್ಲೆಯ ಕ್ಯಾಲೆಂಡರ್ ಆಫ್ ಆಪರೇಷನ್ ಪ್ರಕಾರ ಗಿಡಮರಗಳು, ನೆಡುತೋಪು ಚೆನ್ನಾಗಿ ಬೆಳೆಯುವ ಬಗ್ಗೆ ಗಮನವಿಟ್ಟು ಕಾಲಕಾಲಕ್ಕೆ ಕೆಲಸ ನಿರ್ವಹಿಸಬೇಕು.

11. ಪೂರ್ಣಗೊಂಡ ಕಾಮಗಾರಿಗಳಿಗೆ ಸರ್ಕಾರದಿಂದ ಅನುದಾನವು, ತುಮಕೂರು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಗೆ ತಲುಪಿದ ನಂತರವೇ ಪಾವತಿ ಮಾಡಲಾಗುವುದು. ನೆಡುತೋಪು ಕಾಮಗಾರಿಗಳಿಗೆ ಯಾವುದೇ ಮುಂಗಡ ಹಣ ಪಾವತಿ ಮಾಡಲಾಗುವುದಿಲ್ಲ.

12. ಈ ಮೇಲಿನ ಕಾಮಗಾರಿಗಳ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳ್ಳುವ ಅನುದಾನ ಮತ್ತು ಅನುಮೋದನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷದಲ್ಲಿ ಸರ್ಕಾರದಿಂದ ಹಣ ಬಿಡುಗಡೆಯಾಗುವುದು ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.

13. ಈ ಅರಣ್ಯ ಕಾಮಗಾರಿಗಳು ಕಾಲಬದ್ಧ ಕಾಮಗಾರಿಗಳಾಗಿದ್ದು, ಅವುಗಳನ್ನು ಕಾಲಮಿತಿ ಮತ್ತು ನಿಗದಿತ ಸಮಯಗಳಲ್ಲಿ ಕಾಮಗಾರಿಗಳನ್ನು ನಿರ್ವಹಿಸಲು ವಿಫಲರಾದಲ್ಲಿ ಅಂತಹ ಕಾಮಗಾರಿಗಳನ್ನೂ ಇಲಾಖೆ ಮೂಲಕ ನಿರ್ವಹಿಸಲಾಗುವುದು ಹಾಗೂ ಇಎಂಡಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಇಲಾಖಾ ಮೂಲಕ ನಿರ್ವಹಿಸಿದಲ್ಲಿ ಹೆಚ್ಚು ವೆಚ್ಚವಾದರೆ ಅದನ್ನು ಸಂಬಂಧಪಟ್ಟವರಿಂದ ವಸೂಲಿ ಮಾಡಲಾಗುವುದು.

14. ವಿಜೇತ ಟೆಂಡರ್‌ದಾರರು ಆದೇಶದ 7 ದಿನಗಳೊಳಗಾಗಿ ಕರಾರನ್ನು ಚಾಲ್ತಿ ದರ ಛಾಪಾ ಕಾಗದದ ಮೇಲೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಸಮಕ್ಷಮದಲ್ಲಿ ಮಾಡಿಕೊಳ್ಳತಕ್ಕದ್ದು.

15. ಕೆಲಸಗಳನ್ನು ಆಯಾಯ ಉಪವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ಪರಿಶೀಲನೆ ಹಾಗೂ ದೃಢೀಕರಣವನ್ನು ಅನುಸರಿಸಿ ಬಿಲ್ಲನ್ನು ಪಾವತಿ ಮಾಡಲಾಗುವುದು ಹಾಗೂ ಪಾವತಿಸುವ ಶೇ. 2 ರಷ್ಟು ಹಣವನ್ನು ಆದಾಯ ತೆರಿಗೆ ಬಾಬ್ತು ಹಿಡಿಯಲಾಗುವುದು ಮತ್ತು 2.5 ರಷ್ಟು ಭದ್ರತಾ ಠೇವಣಿ ಹಿಡಿಯಲಾಗುವುದು. ಕಾಲಬದ್ಧ ಕೆಲಸಗಳ ಬಾಬ್ತು ಸರ್ಕಾರವು ನಿಗದಿಪಡಿಸಿದ ಇತರೆ ತೆರಿಗೆಗಳನ್ನು ಸಂಬಂಧಪಟ್ಟ ಬಿಲ್ಲುಗಳಲ್ಲಿ ಕಟಾಯಿಸಲಾಗುವುದು.

16. ಯಾವುದೇ ತಕರಾರಿನ ಬಗ್ಗೆ ತುಮಕೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು. ಅವರ ಆದೇಶವು ಅಧೀನಾಧಿಕಾರಿಗಳಿಗೆ ಹಾಗೂ ಗುತ್ತಿಗೆದಾರರಿಗೆ ಪಾಲನಾರ್ಹವಾದುದು.
17. ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಆದೇಶದ ಬಗ್ಗೆ ತೃಪ್ತಿಯಿಲ್ಲವಾದರೆ ಹಾಸನ ವೃತ್ತದ ಅರಣ್ಯ ಸಂರಕ್ಷಣಾಧಿಕಾರಿಯವರಲ್ಲಿ ಮೇಲ್ಮನವಿ ಸಲ್ಲಿಸಬಹುದು ಹಾಗೂ ಅವರು ಕೊಡುವ ತೀರ್ಪು ಅಂತಿಮವಾದುದು.
18. ಕಾಮಗಾರಿ ಸ್ಥಳಗಳು ತಾತ್ಕಾಲಿಕವಾಗಿದ್ದು ಅವುಗಳ ಸ್ಥಳ ಬದಲಾವಣೆಗಳಾಗುವ ಸಂಭವವಿರುತ್ತದೆ. ಹೆಚ್ಚಿನ ಮಾಹಿತಿಗಾಗಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.
19. ಕೆಲಸದ ಪರಿಮಾಣ ಹೆಚ್ಚುವರಿ ಅಥವಾ ಕಡಿಮೆಯಾಗುವ ಸಾಧ್ಯತೆಯಿದ್ದು ಹೆಚ್ಚುವರಿಯಾದ ಕೆಲಸವನ್ನು ಹಾಗೂ ಇತರೆ ಕಾಮಗಾರಿಗಳನ್ನು ಸಹ ಒಪ್ಪಿಗೆಯಾದ ಟೆಂಡರಿನ ದರದಲ್ಲಿ ಆಯಾ ವಲಯ ಅರಣ್ಯಾಧಿಕಾರಿಗಳು ಸೂಚಿಸುವ ಜಾಗದಲ್ಲಿಯೇ ಮಾಡತಕ್ಕದ್ದು.
20. ಕರ್ನಾಟಕ ಅರಣ್ಯ ಕಾಯ್ದೆ ಕರ್ನಾಟಕ ಅರಣ್ಯ ಸಂಹಿತೆ, ಕರ್ನಾಟಕ ಅರಣ್ಯ ಮ್ಯಾನ್ಯುಯಲ್ ಹಾಗೂ ಸರ್ಕಾರಿ ಅಧಿಸೂಚನೆ: ಆದೇಶಗಳು ಮತ್ತು ಕಾಲಕಾಲಕ್ಕೆ ಇಲಾಖೆಯಿಂದ ನೀಡಿದ ಸುತ್ತೋಲೆ ಮೇಲೆ ನಿರ್ದೇಶನ ಪ್ರಕಾರ ಅರಣ್ಯ ಗುತ್ತಿಗೆದಾರರು ಹಾಗೂ ಒಟ್ಟಾಗಿ ಕಾಮಗಾರಿಗಳನ್ನು ನಿರ್ವಹಿಸುವುದು.

ಪಿ.ಆರ್.281 ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ತುಮಕೂರು ವಿಭಾಗ, ತುಮಕೂರು
## ಸಂಕ್ಷಿಪ್ತ ಟೆಂಡರ್-ಕಂ-ಹರಾಜು ಪ್ರಕಟಣೆ
### ಸಂ: ಎ8:ಸೇಲ್ಸ್:ಸಿಆರ್:11:05-06 ದಿನಾಂಕ: 9ನೇ ಮೇ 2005

2005-2007 (1.7.2005 ರಿಂದ 30.6.2007) ತುಮಕೂರು ಅರಣ್ಯ ವಿಭಾಗ ವ್ಯಾಪ್ತಿಯ ವಲಯಗಳಲ್ಲಿನ (ಮೇ: ಕೆಎಫ್‌ಡಿಸಿ ಬೆಂಗಳೂರು ರವರಿಗೆ ಹಸ್ತಾಂತರಿಸಿರುವ ಅರಣ್ಯ ಪ್ರದೇಶ ಮತ್ತು ಗ್ರಾಮ ಅರಣ್ಯ ಸಮಿತಿಗಳಿಗೆ ಸೇರ್ಪಡೆಯಾಗಿರುವ ಅರಣ್ಯ ಪ್ರದೇಶ ಹೊರತುಪಡಿಸಿ) ಮರಡಿ ಬೀಜ, ತೂಪ್ರಾಎಲೆ, ಸೀತಾಫಲ, ಹುಣಸೆ ಹಣ್ಣು ಮತ್ತು ಇತರೆ ಕಿರು ಅರಣ್ಯ ಉತ್ಪನ್ನ ಎತ್ತುವಳಿ ಗುತ್ತಿಗೆ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ವಿಭಾಗದ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ 2005-2007ರ ಸಾಲಿಗೆ (1.7.2005 ರಿಂದ 30.06.2007) ರ ಅವಧಿಗೆ ತುಮಕೂರು ಅರಣ್ಯ ವಿಭಾಗದ ವಲಯಗಳಲ್ಲಿನ ತೂಪ್ರಾ ಎಲೆ, ಸೀತಾಫಲ, ಹುಣಸೇ ಹಣ್ಣು ಮರಡಿ ಬೀಜ, ಮತ್ತು ಇತರೆ ಕಿರು ಅರಣ್ಯ ಉತ್ಪನ್ನಗಳ ಎತ್ತುವಳಿ ಗುತ್ತಿಗೆ ಹಾಗೂ ಇನ್ನು ಮುಂದೆ ರೂಢಿಸಿಕೊಳ್ಳುವ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗರವರಿಂದ ಟೆಂಡರ್-ಕಂ-ಹರಾಜು ಮೂಲಕ ಪೂರ್ಣ ಹರಾಜು ಇಸ್ತಿಹಾರಿನ ಷರತ್ತುಗಳಿಗನುಗುಣವಾಗಿ ವಿಲೇವಾರಿ ಮಾಡಲಾಗುವುದು. ಟೆಂಡರ್ ಫಾರಂಗಳನ್ನು ದಿನಾಂಕ: 27.06.2005 ರಂದು ಮಧ್ಯಾಹ್ನ 1.00 ಘಂಟೆಯವರೆಗೆ ವಿತರಿಸಲಾಗುವುದು ಹಾಗೂ ಆ ದಿನವೇ ಟೆಂಡರ್-ಕಂ-ಹರಾಜು ಮಾಡಲಾಗುವುದು. ದಿನಾಂಕ: 27.06.2005 ರಂದು ನಡೆಯುವ ಹರಾಜು ಹಾಗೂ ಟೆಂಡರ್‌ಗಳಲ್ಲಿ ಬಿಡ್‌ದಾರರು ಭಾಗವಹಿಸದೇ ಇದ್ದಲ್ಲಿ ಅಥವಾ ಬಿಡ್ಡುಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿದ್ದಲ್ಲಿ ಅಥವಾ ಯಾವುದೇ ಕಾರಣದಿಂದ ಟೆಂಡರ್-ಕಂ-ಹರಾಜು ಆಗದೇ ಇದ್ದಲ್ಲಿ ಅಥವಾ ಪೂರ್ಣವಾಗದಿದ್ದರೂ ದಿನಾಂಕ: 7.7.2005 ಮತ್ತು 14.07.2005 ರಂದು ಮರುಹರಾಜು ನಡೆಸಲಾಗುವುದು. ಈ ಮರು ಹರಾಜಿಗೆ ಪುನಃ ಯಾವುದೇ ರೀತಿಯ ಪ್ರಕಟಣೆಯನ್ನು ನೀಡಲಾಗುವುದಿಲ್ಲ, ಹೆಚ್ಚಿನ ವಿವರಗಳಿಗೆ ಹಾಗೂ ಷರತ್ತುಗಳಿಗೆ ಕಛೇರಿ ವೇಳೆಯಲ್ಲಿ ಪಡೆಯಬಹುದು.

ಪಿ.ಆರ್.282 ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

## ಮುಖ್ಯ ಇಂಜಿನಿಯರ್‌ರವರ ಕಛೇರಿ, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು
## ಟೆಂಡರ್-ಕಂ-ಹರಾಜು ಪ್ರಕಟಣೆ
### ಸಂ: ಮುಇಂ:ಸಂಕದ:ಉಗ್ರಾಣ:ಕಂಪ್ಯೂಟರ್:ಹರಾಜು:2005-06 ದಿನಾಂಕ: 13ನೇ ಮೇ 2005

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಬೆಂಗಳೂರಿನ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ವಲಯದ ಮುಖ್ಯ ಅಭಿಯಂತರವರ ಕಛೇರಿಯಲ್ಲಿರುವ ಅನುಪಯುಕ್ತ ಕಂಪ್ಯೂಟರ್‌ಗಳು ಮತ್ತು ಇತರೆ ಪೂರಕ ಉಪಕರಣಗಳನ್ನು ಟೆಂಡರ್-ಕಂ-ಹರಾಜು ಮೂಲಕ ವಿಲೇವಾರಿ ಮಾಡಲು ಉದ್ದೇಶಿಸಿದೆ. ವಿವರಗಳು ಈ ರೀತಿ ಇವೆ.

| | | |
|---|---|---|
| 1) | ಕಂಪ್ಯೂಟರ್‌ಗಳು - ವಿವಿಧ ಕಂಪನಿಯವು | 14 ನಂ. |
| 2) | ಯುಪಿಎಸ್‌ಗಳು-1.5 ಕೆವಿಎ ಸಾಮರ್ಥ್ಯದವು. | 4 ನಂ. |
| 3) | ಸ್ಟೆಬಿಲೈಜರ್‌ಗಳು ವಿವಿಧ ಸಾಮರ್ಥ್ಯದವು | 2 ನಂ. |
| 4) | ಫ್ಲಾಪಿಗಳು-ವಿವಿಧ ಸಾಮರ್ಥ್ಯದವು | 1 ನಂ. |
| 5) | ಪ್ರಿಂಟರ್‌ಗಳು | 6 ನಂ. |
| 6) | ಸ್ಕ್ಯಾನರ್‌ಗಳು | 1 ನಂ. |
| 7) | ಲ್ಯಾಮಿನೇಟಿಂಗ್ ಮಿಷನ್ | 1 ನಂ. |

ಇಚ್ಛಿತ ಟೆಂಡರ್: ಬಿಡ್ಡುದಾರರು ಈ ಸಾಮಗ್ರಿಗಳನ್ನು ಕಛೇರಿ ವೇಳೆಯಲ್ಲಿ ಪರಿವೀಕ್ಷಣೆ ಮಾಡಬಹುದು. ಮೇಲ್ಕಂಡ ಸಾಮಗ್ರಿಗಳನ್ನು "ಎಲ್ಲಿ ಹೇಗಿವೆಯೋ ಅದೇ ಸ್ಥಿತಿಯಲ್ಲಿ" ವಿಲೇವಾರಿ ಮಾಡಲಾಗುವುದು.

ಇಚ್ಛಿತ ಟೆಂಡರ್‌ದಾರರು ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ: 13.06.2005 ರಿಂದ 7.6.2005ರ ವರೆವಿಗೆ ಟೆಂಡರ್ ಫಾರಂನ ಮೌಲ್ಯ ಸೆಟ್ 1ಕ್ಕೆ 200 ರೂ.ಗಳನ್ನು ಪಾವತಿ ಮಾಡಿ ಪಡೆದುಕೊಳ್ಳಬಹುದು. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು 10,000 ರೂ.ಗಳ ಇ.ಎಂ.ಡಿ ಸಮೇತ ದಿನಾಂಕ: 21.06.2005 ರಂದು ಸಂಜೆ 4.00 ಗಂಟೆಯೊಳಗೆ ಸಲ್ಲಿಸುವುದು. ನಂತರಬಂದ ಟೆಂಡರ್‌ಗಳನ್ನು ಅಥವಾ ಇ.ಎಂ.ಡಿ. ರಹಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಇ.ಎಂ.ಡಿ.ಯನ್ನು ಕಾರ್ಯಪಾಲಕ ಅಭಿಯಂತರರು (ಎಕ್ಸಿಕ್ಯೂಟಿವ್ ಇಂಜಿನಿಯರ್) ಲೋಕೋಪಯೋಗಿ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರ ಹೆಸರಿನಲ್ಲಿ ಪಡೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಸಲ್ಲಿಸುವುದು.

ದಿನಾಂಕ: 22.06.2005 ರಂದು ಮಧ್ಯಾಹ್ನ 12.00 ಗಂಟೆಗೆ ಈ ಕಛೇರಿ ಆವರಣದಲ್ಲಿ ಬಹಿರಂಗ ಹರಾಜು ನಡೆಸಲಾಗುವುದು. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು (ಟೆಂಡರ್‌ದಾರರು ಸೇರಿದಂತೆ) 10,000.00 ರೂ.ಗಳನ್ನು ನಗದಾಗಿ ಇ.ಎಂ.ಡಿ. ಸಲ್ಲಿಸಿ ಹರಾಜಿನಲ್ಲಿ ಭಾಗವಹಿಸಬಹುದು.

ಹರಾಜಿನ ನಂತರ ಟೆಂಡರ್‌ಗಳನ್ನು ತೆರೆಯಲಾಗುವುದು. ಟೆಂಡರ್: ಬಿಡ್‌ನ ಗರಿಷ್ಠ ಮೊಬಲಗನ್ನು ಪರಿಗಣಿಸಲಾಗುವುದು. ಉಳಿದ ಟೆಂಡರ್: ಬಿಡ್‌ದಾರರ ಇ.ಎಂ.ಡಿ. ಯನ್ನು ವಾಪಸ್ಸು ಮಾಡಲಾಗುವುದು. ಗರಿಷ್ಠ ಟೆಂಡರ್: ಬಿಡ್‌ನ ಅಂಗೀಕಾರವು ಸಕ್ಷಮ ಪ್ರಾಧಿಕಾರದ ಅಧಿಕಾರಕ್ಕೆ ಒಳಪಟ್ಟಿರುತ್ತದೆ.

ಯಾವುದೇ ಕಾರಣವನ್ನು ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್: ಬಿಡ್ಡನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಸಕ್ಷಮ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ.

ಮುಖ್ಯ ಇಂಜಿನಿಯರ್,

ಪಿ.ಆರ್.278 ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು.

## ಜಲ ಸಂಪನ್ಮೂಲ ಇಲಾಖೆ

## ಕಾರ್ಯನಿರ್ವಾಹಕ ಅಭಿಯಂತರರವರ ಕಾರ್ಯಾಲಯ, ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ

## ಟೆಂಡರ್ ಅವಧಿ ವಿಸ್ತರಣೆ ಹಾಗೂ ತಿದ್ದುಪಡಿ-3

**ಸಂಖ್ಯೆ: ಸನೀವಿಗು/ಯೋಶಾ-3/ಹೊನ್ನಳ್ಳಿ/ಬಿಸಿಬಿ/ಟೆಂಡರ್ ಅವಧಿ ವಿಸ್ತರಣೆ: 2005-06/1304 ದಿನಾಂಕ: 7ನೇ ಮೇ 2005**

**ವಿಷಯ :** ಗುಲಬರ್ಗಾ ಜಿಲ್ಲೆ ಹಾಗೂ ತಾಲೂಕಿನ ಮುಲ್ಲಾಮಾರಿ ನದಿಗೆ ಅಡ್ಡಲಾಗಿ ಹೊನ್ನಳ್ಳಿ ಗ್ರಾಮದ ಹತ್ತಿರ ಬ್ಯಾರೇಜ್ ಕಂ ಬ್ರಿಡ್ಜ್ ನಿರ್ಮಾಣ ಕಾಮಗಾರಿ ಕುರಿತು.

**ಉಲ್ಲೇಖ :** 1. ಈ ಕಛೇರಿ ಟೆಂಡರ್ ಪ್ರಕಟಣೆ ಸಂಖ್ಯೆ: 766 ದಿನಾಂಕ: 11.03.2005

2. ಈ ಕಛೇರಿ ಟೆಂಡರ್ ಅವಧಿ ವಿಸ್ತರಣೆ-2 ಪ್ರಕಟಣೆ ಸಂಖ್ಯೆ: 1065 ದಿನಾಂಕ: 8.4.2005.

ಈ ಮೇಲಿನ ವಿಷಯದ ಪ್ರಕಾರ ಗುಲಬರ್ಗಾ ಜಿಲ್ಲೆ ಹಾಗೂ ತಾಲ್ಲೂಕಿನ ಮುಲ್ಲಾಮಾರಿ ನದಿಗೆ ಅಡ್ಡಲಾಗಿ ಹೊನ್ನಳ್ಳಿ ಗ್ರಾಮದ ಹತ್ತಿರ ಬ್ಯಾರೇಜ್ ಕಂ ಬ್ರಿಡ್ಜ್ ನಿರ್ಮಾಣ ಕಾಮಗಾರಿ ಟೆಂಡರ್ ಅವಧಿ ವಿಸ್ತರಣೆ ಹಾಗೂ ತಿದ್ದುಪಡಿಯೊಂದಿಗೆ ಪ್ರಕಟಿಸಲಾಗಿದೆ.

ಟೆಂಡರ್ ದಸ್ತಾವೇಜುಗಳಿಗೆ ಅರ್ಜಿ ವಿತರಿಸುವ ಹಾಗೂ ಸ್ವೀಕರಿಸುವ ದಿನಾಂಕಗಳು.

1) ಖಾಲಿ ಟೆಂಡರ್ ದಸ್ತಾವೇಜುಗಳನ್ನು ಪಡೆಯಲು ಗುತ್ತಿಗೆದಾರರಿಂದ ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ — 01.06.2005 ಸಾಯಂಕಾಲ 5.30 ಗಂಟೆಯವರೆಗೆ
2) ಖಾಲಿ ಟೆಂಡರ್ ದಸ್ತಾವೇಜುಗಳನ್ನು ಈ ಕಛೇರಿಯಿಂದ ಗುತ್ತಿಗೆದಾರರಿಗೆ ನೀಡುವ ದಿನಾಂಕ — 07.06.2005 ಸಾಯಂಕಾಲ 5.30 ಗಂಟೆಯವರೆಗೆ
3) ಭರ್ತಿ ಮಾಡಿದ ಮೊಹರಬಂದ ಟೆಂಡರ್ ದಸ್ತಾವೇಜುಗಳನ್ನು ಗುತ್ತಿಗೆದಾರರಿಂದ ಸ್ವೀಕರಿಸುವ ದಿನಾಂಕ — 10.06.2005 ಸಾಯಂಕಾಲ 4.00 ಗಂಟೆಯವರೆಗೆ.

**ಸೂಚನೆ:**

1. ಉಲ್ಲೇಖ (1)ರ ಟೆಂಡರ್ ಪ್ರಕಟಣೆ ಪ್ರಕಾರ ಇ.ಎಂ.ಡಿ. ಮೊತ್ತವನ್ನು ಅರ್ಜಿಸಲ್ಲಿಸುವ ದಿನಾಂಕದಂದೇ ಅರ್ಜಿಯೊಂದಿಗೆ ಸೂಚಿಸಲಾಗಿತ್ತು. ಈಗ ಇದನ್ನು ಖಾಲಿ ಟೆಂಡರ್ ದಸ್ತಾವೇಜುಗಳನ್ನು ನೀಡುವ ದಿನಾಂಕದಂದು ಸಲ್ಲಿಸುವ ಕುರಿತಾಗಿ ತಿದ್ದುಪಡಿ ಮಾಡಲಾಗಿದೆ.
2. ಇನ್ನುಳಿದ ಎಲ್ಲಾ ಕರಾರುಗಳು ಉಲ್ಲೇಖ (1) ರನ್ವಯ ಕರೆಯಲಾದ ಟೆಂಡರ್ ಪ್ರಕಟಣೆಯಂತೆ ಇರುತ್ತವೆ.

**ಪ್ರಕಾಶ್ ಶ್ರೀಹರಿ ಬಿ.**

ಪಿ.ಆರ್.279 ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ.

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನೀಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ

## ಟೆಂಡರ್ ಮುಂದೂಡಿಕೆ ಪ್ರಕಟಣೆ

**ಸಂಖ್ಯೆ: ಕಾಅ:ಸನೀವಿ:ಶಿವಮೊಗ್ಗ: ಎಇ-2:936/2005-06 ದಿನಾಂಕ: 30ನೇ ಏಪ್ರಿಲ್ 2005**

**ಉಲ್ಲೇಖ :** 1. ಈ ಕಛೇರಿಯ ಟೆಂಡರ್ ಪ್ರಕಟಣೆ ಸಂಖ್ಯೆ: ಕಾಅ: ಸನೀವಿ: ಶಿವಮೊಗ್ಗ: ಎಇ-2: 04/04-05/196 ದಿನಾಂಕ: 3.2.05.

2. ಟೆಂಡರ್ ತಿದ್ದುಪಡಿ ಪ್ರಕಟಣೆ ಸಂಖ್ಯೆ: ಕಾಅ: ಸನೀವಿ: ಶಿವಮೊಗ್ಗ:ಎಇ-2:275/04-05 ದಿನಾಂಕ: 14.02.05 ಹಾಗೂ ಟೆಂಡರ್ ಮುಂದೂಡಿಕೆ ಪ್ರಕಟಣೆ ಸಂಖ್ಯೆ: ಕಾಅ: ಸನೀವಿ: ಶಿವಮೊಗ್ಗ: ಎಇ-2:669/04-05 ದಿನಾಂಕ: 22.03.05.
3. ಟೆಂಡರ್ ಮುಂದೂಡಿಕೆ ಪ್ರಕಟಣೆ ಸಂಖ್ಯೆ: ಕಾಅ: ಸನೀವಿ: ಶಿವಮೊಗ್ಗ: ಎಇ-2: 831/05-06 ದಿನಾಂಕ: 8.4.05.

ಸೊರಬ ತಾಲ್ಲೂಕು ಮೂಗೂರು ಗ್ರಾಮದ ಹತ್ತಿರ ವರದಾ ನದಿಗೆ ಅಡ್ಡಲಾಗಿ ಬ್ಯಾರೇಜು ನಿರ್ಮಾಣ (ನಬಾರ್ಡ್ ಅಡಿಯಲ್ಲಿ) ಕಾಮಗಾರಿಗೆ ಮೇಲಿನ ಉಲ್ಲೇಖ (1)ರಲ್ಲಿ ಟೆಂಡರ್ ಪ್ರಕಟಣೆ ಹೊರಡಿಸಿದ್ದು, ನಂತರ ಉಲ್ಲೇಖ (2) ಹಾಗೂ (3) ರಲ್ಲಿ ಟೆಂಡರ್ ಮುಂದೂಡಿಕೆ ಹಾಗೂ ತಿದ್ದುಪಡಿ ಪ್ರಕಟಣೆಯನ್ನು ಹೊರಡಿಸಲಾಗಿತ್ತು. ಈಗ ಟೆಂಡರನ್ನು ಮರು ಮುಂದೂಡಲಾಗಿದ್ದು, ಆ ದಿನಾಂಕಗಳು ಈ ಕೆಳಗಿನಂತಿರುತ್ತದೆ. ಇನ್ನುಳಿದಂತೆ ಕಾಮಗಾರಿಗಳಲ್ಲಿ ಹಾಗೂ ಷರತ್ತುಗಳಿಗೆ ಯಾವುದೇ ಬದಲಾವಣೆಗಳು ಇರುವುದಿಲ್ಲ.

| ಕ್ರ.ಸಂ. | ವಿವರಗಳು | ಮುಂದೂಡಲಾದ ದಿನಾಂಕ | ಮರು ಮುಂದೂಡಲಾದ ದಿನಾಂಕ |
|---|---|---|---|
| 1. | ಖಾಲಿ ಟೆಂಡರ್-ಫಾರಂಗಳನ್ನು ಕೊಡುವ ದಿನಾಂಕ | 30.04.2005 ಸಂಜೆ 5.00 ಗಂಟೆಯವರೆಗೆ ಕೊಡಲಾಗುವುದು. | 25.05.2005ರ ಸಂಜೆ 5.00 ಗಂಟೆಯವರೆಗೆ ಕೊಡಲಾಗುವುದು. |
| 2. | ಭರ್ತಿಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ದಿನಾಂಕ (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಒಳಗೊಂಡಂತೆ) | 05.05.2005 ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸುವುದು. | 31.05.2005ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸುವುದು. |

ಕಾರ್ಯಪಾಲಕ ಇಂಜಿನಿಯರ್,

ಪಿ.ಆರ್.280 ಸಣ್ಣನೀರಾವರಿ ವಿಭಾಗ, ಶಿವಮೊಗ್ಗ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಟೆಂಡರ್ ಪ್ರಕಟಣೆ

### ಸಂಖ್ಯೆ: ಸಿಆಸುಇ 60 ಡಿಸಭೆ 2005 ಬೆಂಗಳೂರು, ದಿನಾಂಕ: 19ನೇ ಮೇ 2005

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಡೆಯುವ ಸಭೆ:ಸಮಾರಂಭಗಳಿಗೆ ಮತ್ತು ರಾಜಭವನದಲ್ಲಿ ನಡೆಯುವ ಪ್ರಮಾಣ ವಚನ ಸ್ವೀಕಾರ ಮುಂತಾದ ಸಮಾರಂಭಗಳಿಗೆ ಈ ಕೆಳಕಂಡ ಪೀಠೋಪಕರಣಗಳು, ಶಾಮಿಯಾನ, ವೇದಿಕೆ ಮುಂತಾದವುಗಳನ್ನು ದರಗುತ್ತಿಗೆ ಆಧಾರದ ಮೇಲೆ ಬಾಡಿಗೆಗೆ ಸರಬರಾಜು ಮಾಡುವ ಬಗ್ಗೆ ಅನುಭವಸ್ಥ ಹಾಗೂ ಪ್ರಸಿದ್ದ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಕರೆಯಲಾಗಿದೆ.

| ಕ್ರಮ ಸಂಖ್ಯೆ | ಪೀಠೋಪಕರಣಗಳ ವಿವರ | ಕ್ವಾಂಟಿಟಿ | ದರಗಳು ರೂ. |
|---|---|---|---|
| 1. | ಸ್ಟೀಲ್ ಫೋಲ್ಡಿಂಗ್ ಚೇರ್ | 100 ನಂ | |
| 2. | ಡೆಲ್ಲಿ ಕೇನ್ ಚೇರ್ | 100 ನಂ. | |
| 3. | ಪೋಡಿಯಂ | ಪ್ರತಿಯೊಂದಕ್ಕೆ | |
| 4. | ಪೋಡಿಯಂ ವೆಲ್ವೆಟ್ | ಪ್ರತಿಯೊಂದಕ್ಕೆ | |
| 5. | ಫೆದರ್‌ಲೈಟ್ ಕುಷನ್ ಚೇರ್ | ಪ್ರತಿಯೊಂದಕ್ಕೆ | |
| 6. | ಫೆದರ್‌ಲೈಟ್ ದರ್ಬಾರ್ ಚೇರ್ | ಪ್ರತಿಯೊಂದಕ್ಕೆ | |
| 7. | ವುಡನ್ ಟೇಬಲ್ಸ್ 6 X 2 | ಪ್ರತಿಯೊಂದಕ್ಕೆ | |
| 8. | ಸಿಂಗಲ್ ಪ್ಲೈ ಟಾಪ್ ಪೇಂಟೆಡ್ ಟೇಬಲ್ಸ್ | ಪ್ರತಿಯೊಂದಕ್ಕೆ | |
| 9. | ವುಡನ್ ಟೇಬಲ್ಸ್ 2 1/2 X 2 1/2 | ಪ್ರತಿಯೊಂದಕ್ಕೆ | |
| 10. | ಸ್ಟೀಲ್ ಫ್ರೇಮ್ಸ್ ಟೇಬಲ್ಸ್ ವಿತ್ ಸ್ಟೀಲ್ ಲೆಗ್ಸ್ | ಪ್ರತಿಯೊಂದಕ್ಕೆ | |
| 11. | ಟೇಬಲ್ ಕ್ಲಾತ್ 7 X 4 | ಪ್ರತಿಯೊಂದಕ್ಕೆ | |
| 12. | ಟೇಬಲ್ ಕ್ಲಾತ್ 4 X 4 | ಪ್ರತಿಯೊಂದಕ್ಕೆ | |
| 13. | ವುಡನ್ ಸ್ಟೇಜ್ | ಸ್ಕ್ವೇರ್‌ಷೀಟ್ | |
| 14. | ಶಾಮಿಯಾನ (ಆರ್ಡಿನರಿ) | ಸ್ಕ್ವೇರ್‌ಷೀಟ್ | |
| 15. | ಸೈಡ್‌ವಾಲ್ | ಸ್ಕ್ವೇರ್‌ಷೀಟ್ | |
| 16. | ಬೆಂಚುಗಳು | ಪ್ರತಿಯೊಂದಕ್ಕೆ | |
| 17. | ಸ್ಟೀಲ್ ಫ್ರೇಮ್ ಬೆಂಚ್ ವಿತ್ ಸ್ಟೀಲ್ ಲೆಗ್ಸ್ | ಪ್ರತಿಯೊಂದಕ್ಕೆ | |
| 18. | ರೆಡ್ ಕಾಯಿರ್‌ಮ್ಯಾಟ್ | ಸ್ಕ್ವೇರ್‌ಷೀಟ್ | |
| 19. | ಫೆದರ್‌ಲೈಟ್ ಫೋಮ್ ಕುಷನ್-ಚೇರ್ ವಿತ್ ಆರ್ಮ್ಸ್ | ಪ್ರತಿಯೊಂದಕ್ಕೆ | |
| 20. | ಟೀಪಾಯ್ (ಬಿಗ್) | ಪ್ರತಿಯೊಂದಕ್ಕೆ | |
| 21. | ವಾಟರ್ ಡ್ರಮ್ಸ್ | ಪ್ರತಿಯೊಂದಕ್ಕೆ | |
| 22. | ವಾಟರ್ ಡ್ರಮ್ಸ್ (ಬಿಗ್) | ಪ್ರತಿಯೊಂದಕ್ಕೆ | |
| 23. | ಸಿಂಟೆಕ್ಸ್ ಟ್ಯಾಂಕ್ಸ್ | ಪ್ರತಿಯೊಂದಕ್ಕೆ | |
| 24. | ವಾಟರ್ ಡ್ರಮ್ (ಹಾಫ್ ಡ್ರಮ್) | ಪ್ರತಿಯೊಂದಕ್ಕೆ | |
| 25. | ಮಗ್ಸ್ | 100 ನಂ | |
| 26. | ವಾಷ್ ಬೇಸಿನ್ ವಿತ್ ಕವರ್ | ಪ್ರತಿಯೊಂದಕ್ಕೆ | |
| 27. | ವಾಷ್ ಬೇಸಿನ್ (ಸ್ಟೀಲ್) | ಪ್ರತಿಯೊಂದಕ್ಕೆ | |
| 28. | ಚೇರ್ ಕ್ಯಾಪ್ಸ್ | ಪ್ರತಿಯೊಂದಕ್ಕೆ | |
| 29. | ಡೀಲಕ್ಸ್ ವೈರ್ ಚೇರ್ಸ್ | 100 ನಂ | |
| 30. | ಫ್ಲ್ಯಾಟ್ ಫಾರ್ಮ್ ಟೀಪಾಯ್ಸ್ | ಪ್ರತಿಯೊಂದಕ್ಕೆ | |
| 31. | ರೆಡ್ ಫ್ರಿಲ್ಸ್ | ಪ್ರತಿಯೊಂದಕ್ಕೆ | |

| ಕ್ರಮ ಸಂಖ್ಯೆ | ಪೀಠೋಪಕರಣಗಳ ವಿವರ | ಕ್ವಾಂಟಿಟಿ | ದರಗಳು ರೂ. |
|---|---|---|---|
| 32. | ಬ್ಲ್ಯೂ ಫ್ರಿಲ್ಸ್ | ಪ್ರತಿಯೊಂದಕ್ಕೆ | |
| 33. | ಸ್ಟೆಪ್ ಕಾರ್ಪೆಟ್ | ಪ್ರತಿಯೊಂದಕ್ಕೆ | |
| 34. | ರೆಡ್ ಕಾರ್ಪೆಟ್ | ಪ್ರತಿಯೊಂದಕ್ಕೆ | |
| 35. | ನಯಾಗರ ಫೌಂಟೇನ್ (ಬಿಗ್) | ಪ್ರತಿಯೊಂದಕ್ಕೆ | |
| 36. | ಬೆಡ್ ಶೀಟ್ 15X15 | ಪ್ರತಿಯೊಂದಕ್ಕೆ | |
| 37. | ಕಾರ್ಪೆಟ್ 60 X 30 ಮತ್ತು 30 X 10 | ಸ್ಕ್ವೇರ್‌ಷೀಟ್ | |
| 38. | ಡೆಲ್ಲಿ ಡರ್ಬಾರ್ ಚೇರ್ಸ್ | ಪ್ರತಿಯೊಂದಕ್ಕೆ | |
| 39. | ಪರ್ಷಿಯನ್ ಕಾರ್ಪೆಟ್ | ಸ್ಕ್ವೇರ್‌ಷೀಟ್ | |
| 40. | ವೈಟ್ ಕ್ಲಾತ್ 60 X 30 ಮತ್ತು 30 X 10 | ಸ್ಕ್ವೇರ್‌ಷೀಟ್ | |
| 41. | ವೆಲ್ವೆಟ್ ಸ್ಕ್ರೀನ್ಸ್ 15 X 15 | ಸ್ಕ್ವೇರ್‌ಷೀಟ್ | |
| 42. | ಪ್ಲಾಸ್ಟಿಕ್ ಚೇರ್ಸ್ | 100 ನಂ | |
| 43. | ಪ್ಲಾಸ್ಟಿಕ್ ಚೇರ್ಸ್ ವಿತ್ ಆರ್ಮ್ಸ್ | 100 ನಂ | |
| 44. | ಫ್ಲ್ಯಾಗ್ ಪೋಲ್ ವಿತ್ ಕ್ಲಾತ್ ಬ್ಯಾಂಡ್ | ಪ್ರತಿಯೊಂದಕ್ಕೆ | |
| 45. | ಟಬುಲರ್ ಸೋಫಾ (ಸಿಂಗಲ್) | ಪ್ರತಿಯೊಂದಕ್ಕೆ | |
| 46. | ಟಬುಲರ್ ಸೋಫಾ (ಡಬಲ್) | ಪ್ರತಿಯೊಂದಕ್ಕೆ | |
| 47. | ಟಬುಲರ್ ಸೋಫಾ (3 ಸೀಟರ್) | ಪ್ರತಿಯೊಂದಕ್ಕೆ | |
| 48. | ಡ್ರೆಸ್ಸಿಂಗ್ ಮಿರರ್ಸ್ | ಪ್ರತಿಯೊಂದಕ್ಕೆ | |
| 49. | ಕ್ಯಾನೋಪೀಸ್ | ಪ್ರತಿಯೊಂದಕ್ಕೆ | |
| 50. | ವುಲನ್ ಕಾರ್ಪೆಟ್ಸ್ | ಸ್ಕ್ವೇರ್‌ಷೀಟ್ | |
| 51. | ಸೋಫಾ (ಬ್ರ್ಯಾಸ್) | ಪ್ರತಿಯೊಂದಕ್ಕೆ | |
| 52. | ಸಿಂಥೆಟಿಕ್ ಕಾರ್ಪೆಟ್ | ಸ್ಕ್ವೇರ್‌ಷೀಟ್ | |
| 53. | ದೊಡ್ಡ ದೀಪದ ಕಂಬ | ಪ್ರತಿಯೊಂದಕ್ಕೆ | |
| 54. | ಬ್ಯಾಕ್ ಡ್ರಾಪ್ | ಪ್ರತಿಯೊಂದಕ್ಕೆ | |
| 55. | ರೌಂಡ್ ಟೇಬಲ್ ವಿತ್ ಕ್ಲಾತ್ | ಪ್ರತಿಯೊಂದಕ್ಕೆ | |

**ಷರತ್ತು ಮತ್ತು ನಿಬಂಧನೆಗಳು:**

1) ನಮೂದಿಸಿರುವ ದರಗಳಲ್ಲಿ ಪೀಠೋಪಕರಣಗಳ ಸಾಗಾಣಿಕೆ ವೆಚ್ಚ ಹಾಗೂ ಲೇಬರ್ ವೆಚ್ಚವು ಸೇರಿ ನಮೂದಿಸತಕ್ಕದ್ದು.
2) ಪೀಠೋಪಕರಣಗಳನ್ನು ಎರಡನೇ ದಿನ ಮತ್ತು ನಂತರದ ದಿನಗಳಿಗೆ ಉಪಯೋಗಿಸಿದಲ್ಲಿ ಸಂಸ್ಥೆಯು ಬಾಡಿಗೆ ವೆಚ್ಚದಲ್ಲಿ ಶೇಕಡಾ 25 ರಿಯಾಯಿತಿ ನೀಡತಕ್ಕದ್ದು.
3) ಒಳ್ಳೆಯ ಗುಣಮಟ್ಟದ ಹಾಗೂ ಸ್ವಚ್ಛವಾಗಿರುವ ಪೀಠೋಪಕರಣಗಳನ್ನೇ ಸಂಸ್ಥೆಯು ಸರಬರಾಜು ಮಾಡತಕ್ಕದ್ದು
4) ಟೆಂಡರ್‌ನೊಂದಿಗೆ ಇ.ಎಂ.ಡಿ (ಠೇವಣಿ) ಮೊತ್ತ ರೂ. 30,000-00 ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ) ಇವರ ಹೆಸರಿಗೆ ಸಲ್ಲಿಸತಕ್ಕದ್ದು. ಇ.ಎಂ.ಡಿ ಸಂಬಂಧ ಬ್ಯಾಂಕ್ ಡ್ರಾಫ್ಟ್ ಲಗತ್ತಿಸಿರದ ಟೆಂಡರನ್ನು ತಿರಸ್ಕರಿಸಲಾಗುವುದು
5) ಅಗತ್ಯವಿದ್ದರೆ ರಜಾ ದಿನಗಳಲ್ಲೂ ಹಾಗೂ ತುರ್ತು ಪ್ರಕರಣಗಳಲ್ಲಿ ಅತ್ಯಂತ ಕಡಿಮೆ ಕಾಲಾವಕಾಶದಲ್ಲಿ ಪೀಠೋಪಕರಣಗಳನ್ನು ಸರಬರಾಜು ಮಾಡಲು ಸಂಸ್ಥೆಯು ಬದ್ಧವಾಗಿರತಕ್ಕದ್ದು.
6) ದೊಡ್ಡ ಪ್ರಮಾಣದಲ್ಲಿ ಸಭೆ/ಸಮಾರಂಭಗಳಿಗೆ ಪೀಠೋಪಕರಣ, ವೇದಿಕೆಗಳನ್ನು ಏರ್ಪಾಡು ಮಾಡಿ ಅನುಭವ ಇರುವಂತಹ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು
7) ಸರಬರಾಜು ಮಾಡುವ ಪೀಠೋಪಕರಣಗಳ ಏರ್ಪಾಡು ತೃಪ್ತಿಕರವಾಗಿರದಿದ್ದಲ್ಲಿ ಅಥವಾ ಉತ್ತಮ ಗುಣಮಟ್ಟದ ಹಾಗೂ ಸ್ವಚ್ಛವಾದ ಪೀಠೋಪಕರಣ, ಶಾಮಿಯಾನ ಇತ್ಯಾದಿಗಳನ್ನು ಸಂಸ್ಥೆಯು ಸರಬರಾಜು ಮಾಡದಿದ್ದಲ್ಲಿ ಮತ್ತು ಕಡಿಮೆ ಕಾಲಾವಕಾಶದಲ್ಲಿ ಪೀಠೋಪಕರಣಗಳನ್ನು ಸರಬರಾಜು ಮಾಡಲು ವಿಫಲರಾದಲ್ಲಿ, ಅವಧಿಗೆ ಮೊದಲೇ

ಗುತ್ತಿಗೆಯನ್ನು ರದ್ದುಗೊಳಿಸಲು ಮತ್ತು ಇ.ಎಂ.ಡಿ ಮೊತ್ತ (ಭದ್ರತಾ ಠೇವಣಿ) ಯನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.

8) ಮೊಹರಾದ ಟೆಂಡರ್‌ಗಳ ಲಕೋಟೆಯ ಮೇಲೆ ಬಾಡಿಗೆ ಆಧಾರದ ಮೇಲೆ ಪೀಠೋಪಕರಣಗಳ ಸರಬರಾಜು ದರಗುತ್ತಿಗೆ ಎಂದು ಬರೆಯತಕ್ಕದ್ದು.

9) ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಭದ್ರತಾ ಠೇವಣಿಯಾಗಿ ಇಟ್ಟುಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ಮೇಲೆ ಯಾವುದೇ ದೂರು ಇಲ್ಲದಿದ್ದಲ್ಲಿ ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು

10) ತುರ್ತು ಪ್ರಕರಣದಲ್ಲಿ ಕೇವಲ 4 ಅಥವಾ 5 ಗಂಟೆಯ ಕಾಲಾವಕಾಶದಲ್ಲಿ ಪೀಠೋಪಕರಣ, ಶಾಮಿಯಾನ, ವೇದಿಕೆ ಸಿದ್ಧಪಡಿಸುವ ಸಂದರ್ಭಗಳಿದ್ದು, ಈ ಸಂಬಂಧ ಎಲ್ಲಾ ಏರ್ಪಾಡುಗಳನ್ನು ಯಾವುದೇ ಕಾರಣ ನೀಡದೆ ಸಿದ್ಧಗೊಳಿಸಲು ಶಕ್ತ ಇರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು

11) ಗುತ್ತಿಗೆ ಅವಧಿಯು ದಿನಾಂಕ: 1.7.2005 ರಿಂದ ಒಂದು ವರ್ಷದ ಅವಧಿಯವರೆಗೆ ಇರುತ್ತದೆ.

12) ಅಯಶಸ್ವಿ ಟೆಂಡರುದಾರರ ಬ್ಯಾಂಕ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು.

13) ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ, ಗುತ್ತಿಗೆಯನ್ನು ರದ್ದುಪಡಿಸಲು ಮತ್ತು ಇ.ಎಂ.ಡಿ (ಭದ್ರತಾ ಠೇವಣಿ) ಯನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾಯ್ದಿರಿಸಿದೆ.

14) ಗುತ್ತಿಗೆದಾರರು ತಮ್ಮಲ್ಲಿರುವ ಮಾನವ ಶಕ್ತಿ, ಪೀಠೋಪಕರಣ, ಶಾಮಿಯಾನ ಇತ್ಯಾದಿಗಳ ವಿವರಗಳನ್ನು ಒದಗಿಸತಕ್ಕದ್ದು

15) ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 19.6.2005 ರಂದು ಮಧ್ಯಾಹ್ನ 3-00 ಗಂಟೆಯವರೆಗೆ, ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು-1 ಈ ಕಚೇರಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

16) ಟೆಂಡರ್‌ಗಳನ್ನು ದಿನಾಂಕ: 19.6.2005 ರಂದು ಮಧ್ಯಾಹ್ನ 4-00 ಗಂಟೆಗೆ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ವಿಧಾನಸೌಧ, ಇವರ ಕಚೇರಿಯಲ್ಲಿ ತೆರೆಯಲಾಗುವುದು.

17) ಯಾವುದೇ ಕಾರಣವನ್ನು ನೀಡದೆ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಅಧಿಕಾರಿಯವರು ಕಾದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ ರವಿಮೂರ್ತಿ**

ಪಿ.ಆರ್. 285

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಕಾರ್ಯಕಾರಿ-1).

## ಅರಣ್ಯ ಇಲಾಖೆ

## ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಮೈಸೂರು ವೃತ್ತ, ಅರಣ್ಯ ಭವನ, ಮೈಸೂರು

## ಅಧಿಕೃತ ಜ್ಞಾಪನಾ ಪತ್ರ

**ಸಂಖ್ಯೆ: ಎ2:ಸಿಬ್ಬಂದಿ:ಅವೀನೇ:ಸಿಆರ್-136/03-04 ದಿನಾಂಕ: 18ನೇ ಮೇ 2005**

**ವಿಷಯ :** ಅರಣ್ಯ ವೀಕ್ಷಕರ ನೇರ ನೇಮಕಾತಿಗಾಗಿ ಆಯ್ಕೆಯಾದ ಅಭ್ಯರ್ಥಿಗಳ ಪಟ್ಟಿ ಪ್ರಕಟಣೆ ಕುರಿತು.

**ಉಲ್ಲೇಖ :** ಈ ಕಛೇರಿ ಅಧಿಸೂಚನೆ ಸಂಖ್ಯೆ: ಎ2: ಸಿಬ್ಬಂದಿ: ಅವೀನೇ: ಸಿಆರ್-136/03-04, ದಿನಾಂಕ: 5.02.2004.

ಮೈಸೂರು ವೃತ್ತದ ಅರಣ್ಯ ಇಲಾಖೆಯಲ್ಲಿ ಅರಣ್ಯ ವೀಕ್ಷಕರ ಹುದ್ದೆಗಳ ನೇರ ನೇಮಕಾತಿಗಾಗಿ ಉಲ್ಲೇಖದಲ್ಲಿ ಅಧಿಸೂಚನೆಯನ್ನು ಹೊರಡಿಸಿ, ಅಭ್ಯರ್ಥಿಗಳಿಂದ ಅರ್ಜಿಗಳನ್ನು ಪಡೆದು ಅರ್ಹ ಅಭ್ಯರ್ಥಿಗಳಿಗೆ ದಿನಾಂಕ: 06.06.2004 ರಂದು ಲಿಖಿತ ಪರೀಕ್ಷೆಯನ್ನು ನಡೆಸಲಾಯಿತು. ಈ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಗಳಿಸಿದ ಅಂಕಗಳ ಆಧಾರದ ಮೇರೆಗೆ, ಮತ್ತು ಉಲ್ಲೇಖದಲ್ಲಿನ ಅಧಿಸೂಚನೆಯಲ್ಲಿ ನಮೂದಿಸಿರುವ ಮೀಸಲಾತಿಗನುಗುಣವಾಗಿ, ಅರ್ಹರಾದ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸಿ, ಈ ಪತ್ರದೊಂದಿಗೆ ಪ್ರಕಟಣೆ ಮಾಡಲಾಗಿದೆ.

ಅರಣ್ಯ ಸಂರಕ್ಷಣಾಧಿಕಾರಿ, ಮೈಸೂರು ವೃತ್ತ, ಮೈಸೂರು.

**Select list of candidates for appointment to the post of Forest Watcher in Mysore Circle subject to verification of records Medical examination and Police verification etc.,**

| Sl. No. | Reg. No. | Name | Sex | Applied Category | Selected Category | Examn. Centre | Obtained Marks (Written test) 6.6.04 | Division Allotted |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1. | 3076 | Ravikumar R. | M | G.M. | G.M. | Mandya | 92 | Mandya |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 2. | 2766 | Sadashiva Jambagi | M | G.M. | G.M. | Mysore | 87 | Hunsur |
| 3. | 2840 | S. Shivakumara | M | S.C. | G.M. | Mandya | 86 | Mandya |
| 4. | 2923 | H. S. Siddaraju | M | IIIA | G.M. | Mysore | 83 | Hunsur |
| 5. | 2531 | Kalaswamy | M | S.C. | S.C. | Mysore | 82 | Mandya |
| 6. | 2708 | H.V. Venkatesh | M | I | I | Mandya | 78 | Mandya |
| 7. | 719 | B. Mahadeva | M | I | I | Mysore | 74 | Hunsur |
| 8. | 3160 | Mitrananda | M | S.C. | S.C. | Mysore | 73 | Hunsur |
| 9. | 2445 | S. Manjunath | M | S.T. | S.T. | Mandya | 73 | Mandya |
| 10. | 2301 | G.V. Naveena | M | S.T. | S.T. | Mandya | 71 | Hunsur |

ಪಿ.ಆರ್.283                ಅರಣ್ಯ ಸಂರಕ್ಷಣಾಧಿಕಾರಿ, ಮೈಸೂರು ವೃತ್ತ, ಮೈಸೂರು.

## ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
## ಬಂದರು ಅಧಿಕಾರಿಯವರ ಕಚೇರಿ, ಹಳೇ ಮಂಗಳೂರು ಬಂದರು-575001
## ಟೆಂಡರ್ ಹಾಗೂ ಬಹಿರಂಗ ಹರಾಜು ಪ್ರಕಟಣೆ
## ಕ್ರ.ಸಂ. ಎಂಎಂಡಿ:ಸಿಆರ್-347/2004-05 ದಿನಾಂಕ: 5ನೇ ಮೇ 2005

**ವಿಷಯ :** ಮಂಗಳೂರು ಬಂದರು- ನಿರುಪಯುಕ್ತ ಉಕ್ಕಿನ ಮೋಟಾರ್ ಟಗ್ "ಗಂಗೊಳ್ಳಿ" ಯ ಹರಾಜಿನ ಕುರಿತು.

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಕರ್ನಾಟಕ ಸರ್ಕಾರದ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಒಡೆತನದ ಮಂಗಳೂರು ಹಳೇ ಬಂದರಿನಲ್ಲಿ ಉಪಯೋಗದಲ್ಲಿಲ್ಲದ ಉಕ್ಕಿನ ಮೋಟಾರ್ ಟಗ್ "ಗಂಗೊಳ್ಳಿ"ನ್ನು ಮತ್ತು ಅದಕ್ಕೆ ಸಂಬಂಧಿಸಿದ ಸಾಧನ ಸಾಮಗ್ರಿ ಸಹಿತ ಎಲ್ಲಿ ಹೇಗಿದೆಯೋ ಅದೇ ಸ್ಥಿತಿಯಲ್ಲಿ ಹಲವು ಷರತ್ತುಗಳಿಗೊಳಪಟ್ಟು ದಿನಾಂಕ: 13.07.2005ರ ಅಪರಾಹ್ನ 3.00 ಗಂಟೆಗೆ ಬಂದರು ಕಚೇರಿ, ಮಂಗಳೂರು, ಹಳೇ ಮಂಗಳೂರು ಬಂದರಿನ ಆವರಣದಲ್ಲಿ ಟೆಂಡರ್ ಹಾಗೂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಟೆಂಡರ್‌ಗಳನ್ನು ದಿನಾಂಕ: 13.07.2005ರ ಅಪರಾಹ್ನ 1.00 ಗಂಟೆಯ ತನಕ ಸ್ವೀಕರಿಸಲಾಗುವುದು. ಸರಕಾರದ ಹರಾಜು ಮಾರಾಟ ಕನಿಷ್ಠ ಬೆಲೆ ರೂ. 1,50,000/=.

ಷರತ್ತುಗಳು ಮತ್ತು ಹೆಚ್ಚಿನ ಮಾಹಿತಿಗಾಗಿ ಬಂದರು ಅಧಿಕಾರಿ, ಬಂದರು ಕಚೇರಿ, ಹಳೇ ಮಂಗಳೂರು ಬಂದರು, ಮಂಗಳೂರು-575 001 ಇವರನ್ನು ಸಂಪರ್ಕಿಸಬಹುದು.

ಪಿ.ಆರ್.284                ಬಂದರು ಅಧಿಕಾರಿ, ಮಂಗಳೂರು.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ
## ಟೆಂಡರ್ ಪ್ರಕಟಣೆ
## ಕ್ರ.ಸಂ. ಎ3:ಬಿಯುಡಿ:ಸಿಆರ್-18/2005-06 ದಿನಾಂಕ: 24ನೇ ಮೇ 2005

**ವಿಷಯ :** ಕಾವೇರಿ ವನ್ಯಜೀವಿ ವಿಭಾಗ ವ್ಯಾಪ್ತಿಯಲ್ಲಿ ಬರುವ ಭೀಮೇಶ್ವರಿ ಆನೆ ಕ್ಯಾಂಪಿನಲ್ಲಿರುವ ಆನೆಗಳಿಗೆ 2005-06ನೇ ಸಾಲಿಗೆ ಆಹಾರ ಸಾಮಗ್ರಿಗಳ ಪೂರೈಕೆಗಾಗಿ ಟೆಂಡರ್ ಕರೆಯುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಕಾವೇರಿ ವನ್ಯಜೀವಿ ವಿಭಾಗದಲ್ಲಿ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ ಕನಕಪುರ ವನ್ಯಜೀವಿ ವಲಯ ಮುತ್ತತ್ತಿ ಶಾಖೆಗೆ ಸೇರಿದ ಭೀಮೇಶ್ವರಿ ಪ್ರದೇಶದಲ್ಲಿ ಸ್ಥಾಪಿಸಿರುವ ಆನೆ ಕ್ಯಾಂಪಿನಲ್ಲಿ ಇರುವ 4 ಆನೆಗಳಿಗೆ ದಿನಾಂಕ: 21.06.2005 ರಿಂದ 31.03.2006ರ ವರೆಗೆ ಬೇಕಾಗುವ ಆಹಾರ ಸಾಮಗ್ರಿಗಳ ಪೂರೈಕೆಗಾಗಿ ಮೊಹರಾದ ಟೆಂಡರನ್ನು ದಿನಾಂಕ: 17.06.2005 ರಂದು ಮಧ್ಯಾಹ್ನ 3.00 ಗಂಟೆಗೆ ಈ ಕಛೇರಿಯಲ್ಲಿ ಕರೆಯಲಾಗಿದೆ. ಈ ದಿನ ಸಾರ್ವತ್ರಿಕ ರಜಾದಿನ ಎಂದು ಘೋಷಿಸಿದಲ್ಲಿ ಟೆಂಡರನ್ನು ಮರುದಿನ ಇದೇ ಸಮಯಕ್ಕೆ ಮುಂದೂಡಿ ನಡೆಸಲಾಗುವುದು ಸರಬರಾಜಿನ ಆಹಾರ ಪದಾರ್ಥಗಳ ವಿವರ ಈ ಕೆಳಕಂಡಂತೆ ಇರುತ್ತದೆ.

**ಪ್ರತಿ ದಿನಕ್ಕೆ ಬೇಕಾಗಬಹುದಾದ ಆಹಾರ ಸಾಮಗ್ರಿಗಳ ವಿವರ**

1. ಆಲದ/ಅತ್ತಿ/ಬಸರಿ/ಅರಳಿ ಕೊಂಬೆ ಸಹಿತ ಸೊಪ್ಪು 2. ಭತ್ತದ ಹುಲ್ಲು 3. ರಾಗಿಹಿಟ್ಟು 4. ಹುರುಳಿ 5. ಕುಸುಬಲಕ್ಕಿ 6. ಉಪ್ಪು. 7. ಬೆಲ್ಲ 8. ತೆಂಗಿನಕಾಯಿ 9. ಹರಳೆಣ್ಣೆ 10. ಬೇವಿನೆಣ್ಣೆ. 11. ಒಣಹುಲ್ಲು 12. ಉದ್ದಿನಕಾಳು 13. ಗೋಧಿ 14. ಹೆಸರುಕಾಳು 15. ಕಬ್ಬು. 16. ಭತ್ತ

ಟೆಂಡರ್ ಫಾರಂಗಳನ್ನು ದಿನಾಂಕ: 16.06.2005 ರಂದು 5.00 ಗಂಟೆವರೆಗೆ ರೂ. 200/- ಮತ್ತು ಚಾಲ್ತಿಯಲ್ಲಿರುವ ತೆರಿಗೆಯನ್ನು ಪಾವತಿಸಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಮೊಹರಾದ ಟೆಂಡರ್‌ಫಾರಂಗಳನ್ನು ದಿನಾಂಕ: 17.06.2005 ರಂದು ಮಧ್ಯಾಹ್ನ 1.30 ಗಂಟೆವರೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು.

**ಷರತ್ತುಗಳು:**

1. ಟೆಂಡರ್‌ನಲ್ಲಿ ಭಾಗವಹಿಸುವ ಗುತ್ತಿಗೆದಾರರು ತುಂಬಿದ ಟೆಂಡರ್ ಫಾರಂನ ಜೊತೆಗೆ ರೂ.10,000/- ಇ.ಎಂ.ಡಿ. ಯನ್ನು ಬ್ಯಾಂಕ್ ಡಿ.ಡಿ. ರೂಪದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ರವರ ಹೆಸರಿನಲ್ಲಿ ಸಲ್ಲಿಸಬೇಕು.
2. ಆಹಾರ ಸಾಮಗ್ರಿಗಳನ್ನು ಪ್ರತ್ಯೇಕವಾಗಿ ಸರಬರಾಜು ಮಾಡುವ ದರವನ್ನು ಪ್ರತಿ ಕೇಜಿಗೆ/ಲೀಟರ್ ಐಟಂವಾರು ಸ್ಪಷ್ಟವಾಗಿ ನಮೂದಿಸಬೇಕು.
3. ಸರಬರಾಜು ಮಾಡುವ ಆಹಾರ ಪದಾರ್ಥಗಳ ಗುಣಮಟ್ಟದಿಂದ ಕೂಡಿರುವ ಬಗ್ಗೆ ನಿಗದಿಪಡಿಸಿದ ಪಶು ವೈದ್ಯಾಧಿಕಾರಿಗಳಿಂದ ದೃಢೀಕೃತಗೊಂಡಿರತಕ್ಕದ್ದು. ತಪ್ಪಿದ್ದಲ್ಲಿ ಸರಬರಾಜು ಮಾಡಿದ ಆಹಾರ ಸಾಮಗ್ರಿಗಳನ್ನು ತಿರಸ್ಕರಿಸಿ ನಿಬಂಧನೆಗಳ ಉಲ್ಲಂಘನೆಗೆ ಕ್ರಮ ಜರುಗಿಸಲಾಗುವುದು.
4. ಈ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಿರುವ ಷರತ್ತುಗಳಲ್ಲದೆ ವಿವರವಾದ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಿರುವ ಎಲ್ಲಾ ಷರತ್ತುಗಳಿಗೂ ಒಳಪಟ್ಟಿರಬೇಕು.
5. ಟೆಂಡರ್‌ನಲ್ಲಿ ಯಾವುದೇ ತಂಟೆತಕರಾರುಗಳು ಬಂದಲ್ಲಿ ಅರಣ್ಯ ಸಂರಕ್ಷಣಾಧಿಕಾರಿಗಳು, ಚಾಮರಾಜನಗರ ವೃತ್ತ, ಚಾಮರಾಜನಗರ ಇವರು ಕೈಗೊಳ್ಳುವ ತೀರ್ಮಾನವು ಅಂತಿಮವಾಗಿರುತ್ತದೆ.
6. ಟೆಂಡರನ್ನು ಯಾವುದೇ ಕಾರಣ ನೀಡದೆ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ ಇವರಲ್ಲಿ ಕಾಯ್ದಿರಿಸಿದೆ.

ಪಿ.ಆರ್.287                ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾವೇರಿ ವನ್ಯಜೀವಿ ವಿಭಾಗ, ಕನಕಪುರ.